# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**

| ಸಂಪುಟ ೧೪೯<br>**Volume 149** | ಬೆಂಗಳೂರು, ಗುರುವಾರ, ಜುಲೈ ೧೭, ೨೦೧೪ (ಆಷಾಢ ೨೬, ಶಕ ವರ್ಷ ೧೯೩೬)<br>**Bangalore, Thursday, July 17, 2014 (Ashadha 26, Shaka Varsha 1936)** | ಸಂಚಿಕೆ ೨೯<br>**Issue 29** |
|---|---|---|

## ಭಾಗ ೩

## ಸರ್ಕಾರದ ಮತ್ತು ಖಾಸಗಿ ಜಾಹೀರಾತುಗಳು, ಲೋಕಸೇವಾ ಆಯೋಗದ ಜಾಹೀರಾತುಗಳು, ನೇಮಕಾತಿ ಸಮಿತಿಗಳ ಜಾಹೀರಾತುಗಳು

**ಪೊಲೀಸ್ ಅಧೀಕ್ಷಕರವರ ಕಛೇರಿ, ಕರಾವಳಿ ಕಾವಲು ಪೊಲೀಸ್, ಉಡುಪಿ.**

**ನೇಮಕಾತಿ ಅಧಿಸೂಚನೆ**

**ಸಂಖ್ಯೆ: 01/ಸಿಬ್ಬಂದಿ-1/2013-14 ದಿನಾಂಕ: 20/06/2014.**

**ವಿಷಯ:** ಕರಾವಳಿ ಕಾವಲು ಪೊಲೀಸ್ ಘಟಕದಲ್ಲಿ ಖಾಲಿ ಇರುವ 47 ವಿವಿಧ ದರ್ಜೆಯ ತಾಂತ್ರಿಕ ಹುದ್ದೆಗಳನ್ನು 05 ವರ್ಷದ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಕ್ರೂಢಿಕೃತ ವೇತನದಡಿಯಲ್ಲಿ ಭರ್ತಿ ಮಾಡಿಕೊಳ್ಳುವ ಬಗ್ಗೆ.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 259 ಪಿಒಪಿ 2007, ದಿನಾಂಕ: 18/03/2008.
2. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 107 ಪಿಒಪಿ 2009, ದಿನಾಂಕ: 10/07/2009.
3. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 94 ಪಿಒಪಿ 2010, ದಿನಾಂಕ: 13/09/2010.
4. ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 17 ಪಿಒಪಿ 2012, ದಿನಾಂಕ: 12/11/2013.

ಭಾರತ ಸರ್ಕಾರದ ಕೇಂದ್ರ ಗೃಹ ಮಂತ್ರಾಲಯವು ಕರಾವಳಿ ಭದ್ರತಾ ಯೋಜನೆ ಹಂತ-೧ ರಲ್ಲಿ ರಾಜ್ಯಕ್ಕೆ ೦೫ ಕರಾವಳಿ ಕಾವಲು ಪೊಲೀಸ್ ಠಾಣೆಗಳನ್ನು ಮಂಗಳೂರು, ಮಲ್ಪೆ, ಭಟ್ಕಳ, ಕುಮಟಾ ಮತ್ತು ಕಾರವಾರದಲ್ಲಿ ಸ್ಥಾಪನೆ ಮಾಡಲು ಮತ್ತು ಈ ಠಾಣೆಗಳಿಗೆ ೧೨ ಟನ್‌ನ ೧೦ ಬೋಟ್‌ಗಳನ್ನು ಮತ್ತು ೫ ಟನ್‌ನ ೦೫ ಬೋಟ್‌ಗಳನ್ನು (ಒಟ್ಟು ೧೫) ಮಂಜೂರು ಮಾಡಿರುತ್ತದೆ.

ಮೇಲ್ಕಂಡ ೦೫ ಠಾಣೆಗಳಿಗೆ ಮಂಜೂರು ಮಾಡಿರುವ ೧೫ ಇಂಟರ್‌ಸೆಪ್ಟರ್ ಬೋಟ್‌ಗಳನ್ನು ನಡೆಸಲು ರಾಜ್ಯ ಸರ್ಕಾರವು ಉಲ್ಲೇಖ-೧ ರ ಆದೇಶದಲ್ಲಿ ವಿವಿಧ ದರ್ಜೆಯ ೬೬ ತಾಂತ್ರಿಕ ಹುದ್ದೆಗಳನ್ನು ಮಂಜೂರು ಮಾಡಿದ್ದು, ಈ ಹುದ್ದೆಗಳಲ್ಲಿ ಪ್ರಸ್ತುತ ೪೭ ತಾಂತ್ರಿಕ ಹುದ್ದೆಗಳು ಖಾಲಿ ಇರುತ್ತವೆ. ಈ ಹುದ್ದೆಗಳನ್ನು ಕ್ರೂಢೀಕೃತ ವೇತನದಡಿಯಲ್ಲಿ ೦೫ ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ನಿವೃತ್ತ ನೌಕಾ/ಕೋಸ್ಟ್ ಗಾರ್ಡ್/ಬಿಎಸ್‌ಎಫ್ (ವಾಟರ್ ವಿಂಗ್) ಅಧಿಕಾರಿ ಮತ್ತು ಸಿಬ್ಬಂದಿಗಳಿಂದ ನೇಮಕಾತಿ ಮಾಡಿಕೊಳ್ಳಲು ಸರ್ಕಾರವು ಉಲ್ಲೇಖ(೨), (೩) ಮತ್ತು (೪) ರ ಆದೇಶದಲ್ಲಿ ಅನುಮತಿಯನ್ನು ನೀಡಿರುತ್ತದೆ.

ಉಲ್ಲೇಖ (೨), (೩) ಮತ್ತು (೪) ರ ಆದೇಶದಂತೆ ಕರಾವಳಿ ಕಾವಲು ಪೊಲೀಸ್ ಘಟಕದಲ್ಲಿ ಖಾಲಿ ಇರುವ ೪೭ ವಿವಿಧ ದರ್ಜೆಯ ತಾಂತ್ರಿಕ ಹುದ್ದೆಗಳನ್ನು ನಿವೃತ್ತ ನೌಕಾ/ಕೋಸ್ಟ್ ಗಾರ್ಡ್/ಬಿಎಸ್‌ಎಫ್ (ವಾಟರ್ ವಿಂಗ್) ಅಧಿಕಾರಿ ಮತ್ತು ಸಿಬ್ಬಂದಿಗಳಿಂದ ಕ್ರೂಢೀಕೃತ ವೇತನದಡಿಯಲ್ಲಿ ೦೫ ವರ್ಷಗಳ ಅವಧಿಗೆ ಗುತ್ತಿಗೆ ಆಧಾರದ ಮೇಲೆ ಭರ್ತಿ ಮಾಡಿಕೊಳ್ಳಲು ಅರ್ಹ ಅಭ್ಯರ್ಥಿಗಳಿಂದ ಅರ್ಜಿಯನ್ನು ಆಹ್ವಾನಿಸಲಾಗಿದೆ.

ಖಾಲಿ ಇರುವ ತಾಂತ್ರಿಕ ಹುದ್ದೆಗಳ ಸಂಖ್ಯೆ, ತಿಂಗಳಿಗೆ ನಿಗಧಿ ಪಡಿಸಿರುವ ಕ್ರೋಢೀಕೃತ ವೇತನ, ವಯೋಮಿತಿ, ಅನುಭವ, ಮತ್ತು ವಿದ್ಯಾರ್ಹತೆ ವಿವರಗಳು ಈ ಕೆಳಕಂಡಂತಿದೆ.

| Sl No. | Name of the Post | No. of Posts vacant | Consolidated Salary per month in Rs. |
|---|---|---|---|
| 1 | Motor Launch Engineer<br>(Police Inspector grade) | 01 | 31,000/- |

| Sl No. | Name of the Post | No. of Posts vacant | Consolidated Salary per month in Rs. |
|---|---|---|---|
| 2 | Boat Captain<br>(Police sub Inspector grade) | 12 | 29,000/- |
| 3 | Assistant Boat Captain<br>(Assistant sub Inspector grade) | 12 | 22,000/- |
| 4 | Motor Launch Mechanic<br>(Assistant sub Inspector grade) | 03 | 22,000/- |
| 5 | Engine Driver<br>(Head constable grade) | 13 | 20,000/- |
| 6 | Khalasi<br>(Police constable grade) | 06 | 18,000/- |
| | **Total** | **47** | |

**A. Eligibility criteria for Retired Navy Officers/staff :**

| | | |
|---|---|---|
| 1. | Motor Launch Engineer<br>(Police Inspector grade) | 1. Chief ERA/Mech. ERA<br>2. Maximum age limit of 50 years<br>3. Minimum 10 years of Experience. |
| 2. | Boat Captain<br>(Police Sub Inspector grade) | 1. Chief Petty Officer/ Master Chief Petty Officer ll and I st class, preferably RP sailors(Radar Plotter having experience of Navigation or in executive branch.)<br>2. Maximum age limit of 45 years<br>3. Minimum 5 years of Experience in Navigation |
| 3. | Assistant Boat Captain<br>(Assistant Sub Inspector grade) | 1. Petty Officer to Chief Petty Officer. Preferably Radar Plotter having experience of Navigation or in executive branch.<br>2. Maximum age limit of 45 years<br>3. Minimum 5 years of Experience in Navigation |
| 4. | Motor Launch Mechanic<br>(Assistant Sub Inspector grade) | 1. Petty Officer to Chief Petty Officer from Mechanical Engineering Branch.<br>2. Maximum age limit of 45 years<br>3. Minimum 5 years of Experience in Navigation |
| 5. | Engine Driver<br>(Head Constable grade) | 1. Petty Officer from Mechanical Engineering Branch.<br>2. Maximum age limit of 45 years<br>3. Minimum 5 years of Experience in Navigation |
| 6. | Khalasi<br>(Police Constable grade) | 1. Sailor<br>2. Maximum age limit of 45 years<br>3. Minimum 5 years of Experience in Navigation. |

**B. Eligibility criteria for Retired Coast Guard Officers/staff:**

| | | |
|---|---|---|
| 1. | Motor Launch Engineer (Police Inspector grade) | 1. SE/USE/PSE<br>2. Maximum age limit of 50 years<br>3. Minimum 10 years of Navigation Experience |
| 2. | Boat Captain<br>(Police Sub Inspector grade) | 1. Adhikari /Uttam Adhikari/ Pradhan Adhikari preferably (Radar Plotter having experience of Navigation or in ;';executive branch.)<br>2. Maximum age limit of 45 years<br>3. Minimum 5 years of Navigation Experience |
| 3. | Assistant Boat Captain<br>(Assistant Sub Inspector grade) | 1. P/Nvk to Adhikari preferably Radar Plotter having experience of Navigation or in executive branch.<br>2. Maximum age limit of 45 years<br>3. Minimum 5 years of Navigation Experience |
| 4. | Motor Launch Mechanic<br>(Assistant Sub Inspector grade) | 1. P/Nvk to Adhikari from Mechanical Engineering Branch.<br>2. Maximum age limit of 45 years<br>3. Minimum 5 years of Navigation Experience |

| | | |
|---|---|---|
| 5. | Engine Driver<br>(Head Constable grade) | 1. P/Nvk.from Mechanical Engineering Branch.<br>2. Maximum age limit of 45 years<br>3. Minimum 5 years of Navigation Experience |
| 6. | Khalasi<br>(Police Constable grade) | 1. Sailor<br>2. Maximum age limit of 45 years<br>3. Minimum 5 years of Navigation Experience |

**C. Eligibility criteria for Retired BSF (water wing) Officers/staff:**

| | | |
|---|---|---|
| 1. | Motor Launch Engineer<br>(Police Inspector grade) | 1. First Class Master Certificate issued by the Mercantile Marine Department or Inland Water Transport corporation under Indian Vessels Act, 1917<br>2. Maximum age limit of 50 years<br>3. Minimum 10 years Experience in Navigation. |
| | | 1. Matriculation from a recognized board or equivalent ; and<br>2. ITI (Industrial Training Institute), Diploma in Motor Mechanic (Diesel/ Petrol Engine) Machinist/ Welder/Carpentry/Electrician/Fitter/Air conditioner/technician/ Electronics/plumbing/ upholstering/painting from a recognized institution.<br>3. Maximum age limit of 50 years<br>4. Minimum 10 years Experience in Navigation. |
| | | 1. Licensed Engine Driver or Motor Engineer or equivalent Certificate of Competency issued by the Mercantile Marine Department or Inland Water Transport Corporation under Indian vessels Act, 1917.<br>2. Maximum age limit of 50 years<br>3. Minimum 10 years Experience in Navigation. |
| 2. | Boat Captain<br>(Police Sub Inspector grade) | 1. 10+2 or its equivalent from a recognized Board or University and<br>2. Second Class Master Certificate issued by the central or State Inland Water Transport Authority or Mercantile Marine Department.<br>3. Maximum age limit of 45 years<br>4. Minimum 5 years experience in Boat Navigation. |
| | | 1. Bachelor Degree in Mechanical Engineering from a recognized University or equivalent; or<br>2. Three Years Diploma in Mechanical or Marine or Automobile Engineering from recognized University or Institution.<br>3. Maximum age limit of 45 years<br>4. Minimum 5 years experience in Boat Navigation. |
| 3. | Assistant Boat Captain<br>(Assistant Sub Inspector grade) | 1. 10+2 or its equivalent from a recognized Board or University and<br>2. Second Class Master Certificate issued by the central or State Inland Water Transport Authority or Mercantile Marine Department.<br>3. Maximum age limit of 45 years<br>4. Minimum 5 years Experience in Boat Navigation |
| 4. | Motor Launch Mechanic<br>(Assistant Sub Inspector grade) | 1. Matriculation from a recognized Board or equivalent ; and<br>2. ITI (Industrial Training Institute), Diploma in Motor Mechanic (Diesel/ Petrol Engine) Machinist/Welder/ Carpentry/Electrician/Fitter/Air conditioner technician/ Electronics/plumbing/upholstering/painting from a recognized institution.<br>3. Maximum age limit of 45 years<br>4. Minimum 5 years experience in Boat Navigation. |
| 5. | Engine Driver<br>(Head Constable grade) | 1. Matriculation from a recognized Board or equivalent ; and<br>2. ITI (Industrial Training Institute), Diploma in Motor Mechanic (Diesel/Petrol/Engine) Machinist/Welder/ Carpentry/Electrician/Fitter/Air conditioner/technician/ Electronics/plumbing/upholstering/painting from a recognized institution.<br>3. Maximum age limit of 45 years<br>4. Minimum 5 years experience in Boat Navigation. |

| | | |
|---|---|---|
| 6. | Khalasi<br>(Police Constable grade) | 1. Matriculation from a recognized Board or equivalent ; and<br>2. One year experience in operation of Boat below 265 HP<br>3. Should know swimming in deep water<br>4. Maximum age limit of 45 years<br>5. Minimum 5 years of experience in Boat Navigation. |

ಮೇಲ್ಕಂಡ ಅರ್ಹತೆಯನ್ನು ಹೊಂದಿರುವ ನಿವೃತ್ತ ನೌಕಾ/ಕೋಸ್ಟ್‌ಗಾರ್ಡ್/ಬಿಎಸ್‌ಎಫ್(ವಾಟರ್ ವಿಂಗ್) ಅಧಿಕಾರಿ ಮತ್ತು ಸಿಬ್ಬಂದಿಗಳು ಮೇಲ್ಕಂಡ ಹುದ್ದೆಗಳಿಗೆ ಅರ್ಜಿಯನ್ನು ಈ ಕೆಳಕಂಡ ನಮೂನೆಯಲ್ಲಿ ಭರ್ತಿ ಮಾಡಿ ದೃಢೀಕೃತ ದಾಖಲಾತಿ ಪ್ರತಿಗಳನ್ನು **"ಪೊಲೀಸ್ ಅಧೀಕ್ಷಕರು, ಕರಾವಳಿ ಕಾವಲು ಪೊಲೀಸ್, ಮತ್ತು ಸದಸ್ಯ ಕಾರ್ಯದರ್ಶಿಗಳು, ತಾಂತ್ರಿಕ ಹುದ್ದೆಗಳ ವಿಶೇಷ ನೇಮಕಾತಿ ಸಮಿತಿ ಆರಾಧನ ಬಿಲ್ಡಿಂಗ್, ಬಿ.ಕೆ. ಶೆಟ್ಟಿ ಕಾಂಪೌಂಡ್, ಬಲೈಪಾದೇ, ಉಡುಪಿ-576101"** ರವರಿಗೆ ಸಲ್ಲಿಸತಕ್ಕದ್ದು.

**ನಮೂನೆ**

**ಕರಾವಳಿ ಕಾವಲು ಪೊಲೀಸ್ ಘಟಕದಲ್ಲಿ ಖಾಲಿಯಿರುವ ತಾಂತ್ರಿಕ ಹುದ್ದೆಗಳ ನೇಮಕಾತಿಗಾಗಿ ಅರ್ಜಿ**

| ಕ್ರಸಂ | ವಿವರಗಳು | |
|---|---|---|
| 1. | ಅಭ್ಯರ್ಥಿಯ ಹೆಸರು | |
| 2. | ಖಾಯಂ ವಿಳಾಸ | |
| 3. | ಧರ್ಮ ಮತ್ತು ಜಾತಿ | |
| 4. | ಅರ್ಜಿ ಸಲ್ಲಿಸಿದ ಹುದ್ದೆ | |
| 5. | ಲಗತ್ತಿಸಿರುವ ದೃಢೀಕೃತ ದಾಖಲಾತಿಗಳು<br>1. ನೌಕಾಪಡೆ/ಕೋಸ್ಟ್‌ಗಾರ್ಡ್/ಬಿಎಸ್‌ಎಫ್(ವಾಟರ್‌ವಿಂಗ್)ನಿಂದ ಡಿಸ್‌ಚಾರ್ಜ್ ಸರ್ಟಿಫಿಕೇಟ್.<br>2. ಪೆನ್‌ಷನ್ ಆರ್ಡರ್ ಪ್ರತಿ<br>3. ವಿದ್ಯಾರ್ಹತೆಯ ಪ್ರಮಾಣ ಪತ್ರಗಳು.<br>4. ಟ್ರಾನ್ಸ್‌ಫರ್ ಸರ್ಟಿಫಿಕೇಟ್/ ಎಸ್.ಎಸ್.ಎಲ್.ಸಿ ಅಂಕಪಟ್ಟಿ (ವಯಸ್ಸಿನ ಧೃಡೀಕರಣಕ್ಕಾಗಿ)<br>5. ತಾಂತ್ರಿಕ ಪರೀಕ್ಷೆಗಳ ಪ್ರಮಾಣ ಪತ್ರಗಳು (ಇದ್ದಲ್ಲಿ)<br>6. ಇತ್ತೀಚಿನ 02 ಸಂಖ್ಯೆಯ ಪಾಸ್‌ಪೋರ್ಟ್ ಸೈಜ್ ಭಾವಚಿತ್ರಗಳು. | |
| ದಿನಾಂಕ:<br>ಸ್ಥಳ: | | **ಅಭ್ಯರ್ಥಿಯ ಸಹಿ** |

**ಖಾಲಿ ಇರುವ ತಾಂತ್ರಿಕ ಹುದ್ದೆಗಳಿಗೆ ಅರ್ಜಿಯನ್ನು ದಿನಾಂಕ: 21/07/2014ರ ಸಂಜೆ 5:00 ಘಂಟೆ ಒಳಗಾಗಿ ಸಲ್ಲಿಸತಕ್ಕದ್ದು. ನಂತರ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.** ಹಾಗೂ ಸದರಿ ಹುದ್ದೆಗಳಿಗೆ ಅರ್ಹರಾದ ಅಭ್ಯರ್ಥಿಗಳನ್ನು ತಾಂತ್ರಿಕ ಹುದ್ದೆಗಳ ವಿಶೇಷ ನೇಮಕಾತಿ ಸಮಿತಿಯ ಮೂಲಕ ಸಂದರ್ಶನವನ್ನು ನಡೆಸಿ ಆಯ್ಕೆ ಮಾಡಿಕೊಳ್ಳಲಾಗುವುದು. ಸಂದರ್ಶನದ ದಿನಾಂಕ ಮತ್ತು ಸ್ಥಳವನ್ನು ಪ್ರತ್ಯೇಕವಾಗಿ ತಿಳಿಸಲಾಗುವುದು.

**ಹೆಚ್. ಆರ್. ಮಹದೇವಯ್ಯ**
ಪೊಲೀಸ್ ಅಧೀಕ್ಷಕರು,
ಕರಾವಳಿ ಕಾವಲು ಪೊಲೀಸ್, ಉಡುಪಿ ಮತ್ತು
ಸದಸ್ಯ ಕಾರ್ಯದರ್ಶಿಗಳು, ತಾಂತ್ರಿಕ ಹುದ್ದೆಗಳ
ವಿಶೇಷ ನೇಮಕಾತಿ ಸಮಿತಿ.

**OFFICE OF THE SUPERINTENDENT OF POLICE,COASTAL SECURITY POLICE, UDUPI**

**RECRUITMENT NOTIFICATION**

**No: 01/EST-1/2013-14 Date: 20/06/2014**

**Sub :** Recruitment of 47 various types of technical posts on contract basis for a period of 5 years based on consolidated salary-reg.

**Ref :**
1. Govt. order No: HD 259 POP 2007, Dtd: 18/03/2008
2. Govt. order No: HD 107 POP 2009, Dtd: 10/07/2009
3. Govt. order No: HD 94 POP 2010, Dtd: 13/09/2010
4. Govt. order No: HD 17 POP 2012, Dtd: 12/11/2013

The Ministry of Home Affairs, Govt. of India, under the Coastal Security Scheme Phase-I has sanctioned 05 Coastal Security Police Stations at Mangalore, Malpe, Bhatkal, Kumta and Karwar including Ten-12 Ton Boats & Five-05 Ton Boats (Total: 15) for these Coastal Security Police Stations.

In order to run the boats sanctioned for the above mentioned Coastal Security Police Stations, the Govt. has sanctioned 66 various types of Technical posts, out of which 47 Technical posts are vacant (vide ref-1). These posts are filled on contract basis for a period of 5 years on consolidated salary and are recruited from retired Navy/Coast Guard/BSF (Water Wing) Officers/Staff (vide ref-2,3,4)

The recruitment process of filling the vacant 47 various types of Technical posts has to be done by retired Navy/Coast Guard/BSF (Water Wing) Officers/staff based on consolidated salary for 5 years for which applications are invited from eligible candidates.

Details of vacant technical posts, age limit, experience, fixed consolidated salary and educational qualification are mentioned below.

| Sl No. | Name of the Post | No. of Posts vacant | Consolidated Salary per month in Rs. |
|---|---|---|---|
| 1 | Motor Launch Engineer<br>(Police Inspector grade) | 01 | 31,000/- |
| 2 | Boat Captain<br>(Police sub Inspector grade) | 12 | 29,000/- |
| 3 | Assistant Boat Captain<br>(Assistant sub Inspector grade) | 12 | 22,000/- |
| 4 | Motor Launch Mechanic<br>(Assistant sub Inspector grade) | 03 | 22,000/- |
| 5 | Engine Driver<br>(Head constable grade) | 13 | 20,000/- |
| 6 | Khalasi<br>(Police constable grade) | 06 | 18,000/- |
| | **Total** | **47** | |

**A. Eligibility criteria for Retired Navy Officers/staff :**

| | | |
|---|---|---|
| 1. | Motor Launch Engineer<br>(Police Inspector grade) | 1. Chief ERA/Mech. ERA<br>2. Maximum age limit of 50 years<br>3. Minimum 10 years of Experience. |
| 2. | Boat Captain<br>(Police Sub Inspector grade) | 1. Chief Petty Officer/ Master Chief Petty Officer ll and l st class, preferably RP sailors(Radar Plotter having experience of Navigation or in executive branch.)<br>2. Maximum age limit of 45 years<br>3. Minimum 5 years of Experience in Navigation |
| 3. | Assistant Boat Captain<br>(Assistant Sub Inspector grade) | 1. Petty Officer to Chief Petty Officer. Preferably Radar Plotter having experience of Navigation or in executive branch.<br>2. Maximum age limit of 45 years<br>3. Minimum 5 years of Experience in Navigation |
| 4. | Motor Launch Mechanic<br>(Assistant Sub Inspector grade) | 1. Petty Officer to Chief Petty Officer from Mechanical Engineering Branch.<br>2. Maximum age limit of 45 years<br>3. Minimum 5 years of Experience in Navigation |
| 5. | Engine Driver<br>(Head Constable grade) | 1. Petty Officer from Mechanical Engineering Branch.<br>2. Maximum age limit of 45 years<br>3. Minimum 5 years of Experience in Navigation |
| 6. | Khalasi<br>(Police Constable grade) | 1. Sailor<br>2. Maximum age limit of 45 years<br>3. Minimum 5 years of Experience in Navigation. |

**B. Eligibility criteria for Retired Coast Guard Officers/staff:**

| | | |
|---|---|---|
| 1. | Motor Launch Engineer (Police Inspector grade) | 1. SE/USE/PSE<br>2. Maximum age limit of 50 years<br>3. Minimum 10 years of Navigation Experience |

| | | |
|---|---|---|
| 2. | Boat Captain<br>(Police Sub Inspector grade) | 1. Adhikari /Uttam Adhikari/ Pradhan Adhikari preferably (Radar Plotter having experience of Navigation or in ;';executive branch.)<br>2. Maximum age limit of 45 years<br>3. Minimum 5 years of Navigation Experience |
| 3. | Assistant Boat Captain<br>(Assistant Sub Inspector grade) | 1. P/Nvk to Adhikari preferably Radar Plotter having experience of Navigation or in executive branch.<br>2. Maximum age limit of 45 years<br>3. Minimum 5 years of Navigation Experience |
| 4. | Motor Launch Mechanic<br>(Assistant Sub Inspector grade) | 1. P/Nvk to Adhikari from Mechanical Engineering Branch.<br>2. Maximum age limit of 45 years<br>3. Minimum 5 years of Navigation Experience |
| 5. | Engine Driver<br>(Head Constable grade) | 1. P/Nvk.from Mechanical Engineering Branch.<br>2. Maximum age limit of 45 years<br>3. Minimum 5 years of Navigation Experience |
| 6. | Khalasi<br>(Police Constable grade) | 1. Sailor<br>2. Maximum age limit of 45 years<br>3. Minimum 5 years of Navigation Experience |

**C. Eligibility criteria for Retired BSF (water wing) Officers/staff:**

| | | |
|---|---|---|
| 1. | Motor Launch Engineer<br>(Police Inspector grade) | 1. First Class Master Certificate issued by the Mercantile Marine Department or Inland Water Transport corporation under Indian Vessels Act, 1917<br>2. Maximum age limit of 50 years<br>3. Minimum 10 years Experience in Navigation. |
| | | 1. Matriculation from a recognized board or equivalent ; and<br>2. ITI (Industrial Training Institute), Diploma in Motor Mechanic (Diesel/ Petrol Engine) Machinist/ Welder/Carpentry/Electrician/Fitter/Air conditioner/ technician/Electronics/plumbing/ upholstering/painting from a recognized institution.<br>3. Maximum age limit of 50 years<br>4. Minimum 10 years Experience in Navigation. |
| | | 1. Licensed Engine Driver or Motor Engineer or equivalent Certificate of Competency issued by the Mercantile Marine Department or Inland Water Transport Corporation under Indian vessels Act, 1917.<br>2. Maximum age limit of 50 years<br>3. Minimum 10 years Experience in Navigation. |
| 2. | Boat Captain<br>(Police Sub Inspector grade) | 1. 10+2 or its equivalent from a recognized Board or University and<br>2. Second Class Master Certificate issued by the central or State Inland Water Transport Authority or Mercantile Marine Department.<br>3. Maximum age limit of 45 years<br>4. Minimum 5 years experience in Boat Navigation. |
| | | 1. Bachelor Degree in Mechanical Engineering from a recognized University or equivalent; or<br>2. Three Years Diploma in Mechanical or Marine or Automobile Engineering from recognized University or Institution.<br>3. Maximum age limit of 45 years<br>4. Minimum 5 years experience in Boat Navigation. |
| 3. | Assistant Boat Captain<br>(Assistant Sub Inspector grade) | 1. 10+2 or its equivalent from a recognized Board or University and<br>2. Second Class Master Certificate issued by the central or State Inland Water Transport Authority or Mercantile Marine Department.<br>3. Maximum age limit of 45 years<br>4. Minimum 5 years Experience in Boat Navigation |
| 4. | Motor Launch Mechanic<br>(Assistant Sub Inspector grade) | 1. Matriculation from a recognized Board or equivalent ; and<br>2. ITI (Industrial Training Institute), Diploma in Motor Mechanic (Diesel/ Petrol Engine) Machinist/Welder/ Carpentry/Electrician/Fitter/Air conditioner technician/ Electronics/plumbing/upholstering/painting from a recognized institution.<br>3. Maximum age limit of 45 years<br>4. Minimum 5 years experience in Boat Navigation. |

| | | |
|---|---|---|
| 5. | Engine Driver<br>(Head Constable grade) | 1. Matriculation from a recognized Board or equivalent ; and<br>2. ITI (Industrial Training Institute), Diploma in Motor Mechanic (Diesel/Petrol/Engine) Machinist/Welder/ Carpentry/Electrician/Fitter/Air conditioner/technician/ Electronics/plumbing/upholstering/painting from a recognized institution.<br>3. Maximum age limit of 45 years<br>4. Minimum 5 years experience in Boat Navigation. |
| 6. | Khalasi<br>(Police Constable grade) | 1. Matriculation from a recognized Board or equivalent ; and<br>2. One year experience in operation of Boat below 265 HP<br>3. Should know swimming in deep water<br>4. Maximum age limit of 45 years<br>5. Minimum 5 years of experience in Boat Navigation. |

The eligible retired Navy/Coast Guard/BSF (Water wing) Officers/staff are instructed to submit the certified attested documents along with the application in below prescribed proforma to the Superintendent of Office, Coastal Security Police, Udupi & Member Secretary to Special Recruitment Committee for Technical posts, Aradhana Building, B.K. Shetty compound, Balaipade, Udupi-576101.

**Proforma**

**Application for the Technical posts in Coastal Security Police unit**

| Sl.No. | Particulars | |
|---|---|---|
| 1. | Name of the candidate | |
| 2. | Permanent address | |
| 3. | Religion & Cast | |
| 4. | Applied for the post of | |
| 5. | Enclosures:-<br>1. Discharge certificate from Indian Navy/Coast Guard/BSF (Water wing).<br>2. Pension order copy.<br>3. Certificate of Educational qualification.<br>4. Transfer certificate/SSLC marks card(for age proof)<br>5. Certificates of Technical exams. (if any)<br>6. Two Latest Passport size photos. | |

Date:

Place: **Signature of the candidate**

The applicants are instructed to **submit the applications on or before 21/07/2014 at 5:00 p.m. Applications received after 21/07/2014 will be rejected**. The Eligible candidates will be selected through special recruitment committee for Technical posts by interview. Date & Place of interview will be intimated separately.

## SUPERINTENDENT OF POLICE, COASTAL SECURITY POLICE, UDUPI AND MEMBER SECRETARY TO SPECIAL RECRUITMENT COMMITTEE FOR TECHNICAL POSTS.

### RECRUITMENT OF TECHNICAL STAFF ON CONTRACT BASIS

The Police Department is recruiting the following technical posts for Coastal Security Police, Udupi on contract basis. Details are as below:

| Sl. No | Designation of the post | No. of posts | Grade | Consolidated Pay |
|---|---|---|---|---|
| 1. | Motor Launch Engineer | 01 | Police Inspector | 31,000/- |
| 2. | Boat Captain | 12 | Police Sub Inspector | 29,000/- |
| 3. | Assistant Boat Captain | 12 | Asst. Sub Inspector of Police | 22,000/- |
| 4. | Engine Driver | 13 | Police Head constable | 20,000/- |
| 5. | Kalasi | 06 | Police constable | 18,000/- |
| 6. | Motor Launch Mechanic | 03 | Asst. Police sub Inspector | 22,000/- |
| | **Total** | **47** | | |

Interested candidates from Retired Navy/Coast Guard personnel and B.S.F Water wing may apply for the above mentioned posts. Last date to submit the application is 21/07/2014 at 5:00 p.m.

For further details, terms and condition may be ascertained from the Secretary and Superintendent of Police Coastal Security Police, Udupi.

**H.R.Mahadevaiah**
Superintendent of Police,
Coastal Security Police, Udupi &
Member Secretary to Special Recruitment
Committee for Technical Posts.

**PR-63**
**SC-20**

## ಅಧ್ಯಕ್ಷರು, ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ, ಚಿಕ್ಕಬಳ್ಳಾಪುರ ರವರ ಕಾರ್ಯಾಲಯ,

### ಅಧಿಸೂಚನೆ

**ಸಂಖ್ಯೆ: ಸಿಬ್ಬಂದಿ(2)ಸಿಆರ್.15/2014-15 ದಿನಾಂಕ: 20/06/2014**

**ವಿಷಯ** : ಚಿಕ್ಕಬಳ್ಳಾಪುರ ಜಿಲ್ಲಾ ಕಂದಾಯ ಘಟಕದಲ್ಲಿ ವಿವಿಧ ಕಾರಣಗಳಿಂದ ತೆರವಾಗಿರುವ ಹಾಗೂ ತೆರವಾಗುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖ** : ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಬೆಂಗಳೂರು ರವರ ಅ.ಸ.ಪತ್ರ ಸಂಖ್ಯೆ: ಆರ್.ಡಿ.33.ಡಿಎಸ್‌ಪಿ.2012, ದಿನಾಂಕ: 21/06/2012.

ಚಿಕ್ಕಬಳ್ಳಾಪುರ ಜಿಲ್ಲೆಯ ಕಂದಾಯ ಘಟಕದಲ್ಲಿ ವಿವಿಧ ಕಾರಣಗಳಿಂದ ಖಾಲಿ ಇರುವ ಹಾಗೂ ತೆರವಾಗಲಿರುವ 18 ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಜಿಗಳನ್ನು ಅಹ್ವಾನಿಸಲಾಗಿದೆ. ಆಸಕ್ತ ಅರ್ಹ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಭರ್ತಿ ಮಾಡಿ, ದಿನಾಂಕ: 21/07/2014 ರ ಸಂಜೆ 5-30 ಗಂಟೆಯ ಒಳಗಾಗಿ ಸಲ್ಲಿಸಬಹುದಾಗಿರುತ್ತದೆ. ಹುದ್ದೆಗಳ ಸಂಖ್ಯೆ ವೇತನಶ್ರೇಣಿ, ಅರ್ಜಿ ಶುಲ್ಕ, ಮೀಸಲಾತಿ ವಿವರಗಳು ಇತ್ಯಾಧಿ ಎಲ್ಲಾ ಷರತ್ತುಗಳನ್ನು ಪ್ರತ್ಯೇಕವಾಗಿ ಅನುಬಂಧದಲ್ಲಿ ವಿವರಿಸಲಾಗಿದೆ. ಈ ಮಾಹಿತಿಯನ್ನು http://cbpur-va.kar.nic.in ವೆಬ್‌ಸೈಟ್ ನಲ್ಲಿಯೂ ಸಹ ಅಪ್‌ಲೋಡ್ ಮಾಡಲಾಗಿರುತ್ತದೆ.

**ಡಾ॥ ವಿಶಾಲ್ ಆರ್., ಭಾ.ಆ.ಸೇ.,**
ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ
ಹಾಗೂ ಜಿಲ್ಲಾಧಿಕಾರಿಗಳು,
ಚಿಕ್ಕಬಳ್ಳಾಪುರ ಜಿಲ್ಲೆ.

**ಅಧಿಸೂಚನೆ ಸಂಖ್ಯೆ: ಸಿಬ್ಬಂದಿ(2)ಸಿಆರ್.15/2014-15 ಕ್ಕೆ ಅನುಬಂಧ**

ಚಿಕ್ಕಬಳ್ಳಾಪುರ ಜಿಲ್ಲೆ, ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಗಳನ್ನು ವರ್ಗೀಕರಣ ಮತ್ತು ಮೀಸಲಾತಿ ಅನ್ವಯ ಕರ್ನಾಟಕ ನಾಗರೀಕ ಸೇವೆಗಳು (Revenue Sub-ordinate Branch) (Cadre and Recruitment) (Amendment) ನಿಯಮಗಳು-2008 ರ ನಿಯಮ-2 ರನ್ವಯ ಮತ್ತು 2009 ರನ್ವಯ ನೇರ ನೇಮಕಾತಿ ಮೂಲಕ ಭರ್ತಿ ಮಾಡಲು ಅರ್ಹ ಹಾಗೂ ಆಸಕ್ತ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆನ್‌ಲೈನ್‌ನಲ್ಲಿ ಆಹ್ವಾನಿಸಲಾಗಿದೆ.

**1. ಹುದ್ದೆಗಳ ಸಂಖ್ಯಾ ವಿವರ ಮತ್ತು ವಿದ್ಯಾರ್ಹತೆ :**

| ಹುದ್ದೆಯ ಹೆಸರು | ಒಟ್ಟು ಹುದ್ದೆ | ವಿದ್ಯಾರ್ಹತೆ |
|---|---|---|
| ಗ್ರಾಮಲೆಕ್ಕಾಧಿಕಾರಿ | 18 | ಪಿ.ಯು.ಸಿ. ಅಥವಾ 12ನೇ ತರಗತಿ ಪರೀಕ್ಷೆಯಲ್ಲಿ (ಸಿಬಿಎಸ್‌ಇ/ ಐಸಿಎಸ್‌ಇ) ಉತ್ತೀರ್ಣರಾಗಿರಬೇಕು ಹಾಗೂ ಕನ್ನಡ ಮತ್ತು ಆಂಗ್ಲ ಭಾಷೆಯ ಗಣಕಯಂತ್ರ ನಿರ್ವಹಣೆ (MS Office) ಬಗ್ಗೆ ಪ್ರಮಾಣ ಪತ್ರಗಳನ್ನು ಅರ್ಜಿ ಸಲ್ಲಿಸುವ ದಿನಾಂಕಕ್ಕೆ ಮುಂಚಿತವಾಗಿ ಹೊಂದಿರಬೇಕು.<br>ಯಾವುದೂ ಇತರೆ ತತ್ಸಮಾನ ವಿದ್ಯಾರ್ಹತೆ ಅಥವಾ ಮುಕ್ತ ವಿದ್ಯಾಲಯದಿಂದ ನೀಡಲಾದ ಪ್ರಮಾಣ ಪತ್ರ ಪರಿಗಣಿಸಲಾಗುವುದಿಲ್ಲ. |

**2. ವೇತನ ಶ್ರೇಣಿ** : ರೂ. 11600-200-12000-250-13000-300-14200-350- 15600-400-17200-450-19000-500-21000

**3. ಮೀಸಲಾತಿ ವರ್ಗೀಕರಣ :**

**(i) ಒಟ್ಟು 14 ಹುದ್ದೆಗಳು 192ನೇ ರೋಸ್ಟರ್ ಬಿಂದುವಿನಿಂದ 205 ರವರೆಗೆ**

| ಕ್ರ. ಸಂ. | ಮೀಸಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 1 | ಪರಿಶಿಷ್ಟ ಜಾತಿ | - | - | 1 | - | 1 | - | - | 2 |

| ಕ್ರ ಸಂ. | ಮೀಸಲಾತಿ | ಸಾಮಾನ್ಯ | ಮಹಿಳೆ | ಗ್ರಾಮೀಣ | ಅಂಗವಿಕಲ | ಮಾಜಿಸೈನಿಕ | ಕನ್ನಡ ಮಾಧ್ಯಮ | ಯೋಜನಾ ನಿರಾಶ್ರಿತರು | ಒಟ್ಟು |
|---|---|---|---|---|---|---|---|---|---|
| 2 | ಪರಿಶಿಷ್ಟ ಪಂಗಡ | 1 | – | – | – | – | – | – | 1 |
| 3 | ಪ್ರವರ್ಗ–1 | – | 1 | – | – | – | – | – | 1 |
| 4 | ಪ್ರವರ್ಗ–2(ಎ) | – | – | – | – | 1 | – | – | 1 |
| 5 | ಪ್ರವರ್ಗ–2(ಬಿ) | – | – | – | – | – | – | – | – |
| 6 | ಪ್ರವರ್ಗ–3(ಎ) | – | 1 | – | – | – | – | – | 1 |
| 7 | ಪ್ರವರ್ಗ–3(ಬಿ) | 1 | – | – | – | – | – | – | 1 |
| 8 | ಸಾಮಾನ್ಯ | 2 | 2 | 1 | – | 1 | – | 1 | 7 |
| | **ಒಟ್ಟು** | **4** | **4** | **2** | – | **3** | – | **1** | **14** |

(ii) ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.6.ಪಿಎಲ್ಎಸ್.2012, ಬೆಂಗಳೂರು, ದಿನಾಂಕ: 06/11/2013 ರಲ್ಲಿ ಗೊತ್ತುಪಡಿಸಿರುವಂತೆ (ಸ್ಥಳೀಯ ಅಭ್ಯರ್ಥಿಗಳು) ಹೈದರಾಬಾದ್–ಕರ್ನಾಟಕ ಪ್ರದೇಶದ (ಜಿಲ್ಲೆಗಳಾದ ಬೀದರ್, ಗುಲ್ಬರ್ಗಾ, ರಾಯಚೂರು, ಕೊಪ್ಪಳ, ಯಾದಗಿರ್ ಮತ್ತು ಬಳ್ಳಾರಿ) ಅಭ್ಯರ್ಥಿಗಳಿಗೆ ನಿಯಮಾನುಸಾರ ನೇಮಕಾತಿ ಪ್ರಕ್ರಿಯೆಯಡಿ ಮೀಸಲಾತಿ ಕಲ್ಪಿಸಬೇಕಾಗಿದ್ದು, ಸರ್ಕಾರದ ಅಧಿಕೃತ ಜ್ಞಾಪನ ಪತ್ರ ಸಂಖ್ಯೆ: ಸಿಆಸುಇ.33.ಹೈಕಉ.2014, ದಿನಾಂಕ: 10/04/2014 ರ ನಿರ್ದೇಶನದಂತೆ ಈ ಹಿಂದಿನ ನೇಮಕಾತಿ ಸಂದರ್ಭದಲ್ಲಿ ಕೈಬಿಟ್ಟು ಹೋಗಿದ್ದ ಕೆಳಕಂಡ ರೋಸ್ಟರ್ ಬಿಂದುಗಳನ್ನು ಗುರುತಿಸಿ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಮೀಸಲಿರಿಸಲಾಗಿದೆ.

**ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಿಗೆ ಮಾತ್ರ ಮೀಸಲಿಟ್ಟಿರುವ ಸ್ಥಾನಗಳು**

| ಕ್ರ ಸಂ. | ಕೈಬಿಟ್ಟು ಹೋದ ರೋಸ್ಟರ್ ಬಿಂದುವಿನ ಸಂಖ್ಯೆ | ರೋಸ್ಟರ್ ಮೀಸಲಾತಿ ವಿವರ | ಭಾರತ ಸಂವಿಧಾನದ ಅನುಚ್ಛೇದದ 371(ಜೆ) ರನ್ವಯ ಸ್ಥಳೀಯ ವ್ಯಕ್ತಿಗಳಿಗೆ ಮೀಸಲಿರಿಸಿದ ಹುದ್ದೆ ವಿವರ ಮತ್ತು ಸಂಖ್ಯೆ |
|---|---|---|---|
| 1 | 88 | ಸಾಮಾನ್ಯ ಅಂಗವಿಕಲ | 1–ಸಾಮಾನ್ಯ ಅಂಗವಿಕಲ |
| 2 | 100 | ಸಾಮಾನ್ಯ ಮಾಜಿ ಸೈನಿಕ | 1– ಸಾಮಾನ್ಯ ಮಾಜಿ ಸೈನಿಕ |
| 3 | 159 | ಪರಿಶಿಷ್ಟ ಜಾತಿ ಅಂಗವಿಕಲ | 1–ಪರಿಶಿಷ್ಟ ಜಾತಿ ಅಂಗವಿಕಲ |
| 4 | 183 | ಪ್ರವರ್ಗ–3(ಬಿ)ಮಾಜಿ ಸೈನಿಕ | 1–ಪ್ರವರ್ಗ–3(ಬಿ)ಮಾಜಿ ಸೈನಿಕ |

ಮೇಲ್ಕಂಡ ಮೀಸಲಾತಿಯನ್ನು ಕ್ಲೈಮು ಮಾಡುವ ಅಭ್ಯರ್ಥಿಯು ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.43. ಹೆಚ್‌ಕೆಸಿ.2013, ಬೆಂಗಳೂರು, ದಿನಾಂಕ: 29/01/2014 ರಲ್ಲಿ ಗೊತ್ತುಪಡಿಸಿರುವಂತೆ ಅನ್ವಯವಾಗುವ ಅನುಬಂಧ–ಎ, ಬಿ, ಸಿ, ಡಿ ಮತ್ತು ಇ ನಮೂನೆಯಲ್ಲಿ ಸಕ್ಷಮ ಪ್ರಾಧಿಕಾರದಿಂದ ದೃಢೀಕರಣ ಪತ್ರ ಪಡೆದು ತಪ್ಪದೆ ಸಲ್ಲಿಸತಕ್ಕದ್ದು. (ನಮೂನೆ ಅನುಬಂಧಿಸಿದೆ)

ಮೇಲ್ಕಂಡ ಹೈದ್ರಾಬಾದ್–ಕರ್ನಾಟಕ ಪ್ರದೇಶದ ಅಭ್ಯರ್ಥಿಗಳಿಗೆ ಮೀಸಲಿರಿಸಿದ 4 ರೋಸ್ಟರ್ ಬಿಂದುಗಳ ಪ್ರವರ್ಗಕ್ಕೆ ಸೇರದ ಇತರೆ ಎಲ್ಲಾ ಅಭ್ಯರ್ಥಿಗಳನ್ನು ಅವರು ಹೈದ್ರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಾಗಿದ್ದರೂ ಸಹ ಉಳಿದ 14 ಹುದ್ದೆಗಳಿಗೆ ಅನ್ವಯವಾಗುವ ಮೀಸಲಾತಿಗೆ ಪರಿಗಣಿಸಲಾಗುವುದು ಎಂಬುದನ್ನು ಗಮನಿಸತಕ್ಕದ್ದು.

4. ಅರ್ಹ ಅಭ್ಯರ್ಥಿಗಳು ಆನ್‌ಲೈನ್ (online) ಮೂಲಕ ಮಾತ್ರವೇ ಅರ್ಜಿಯನ್ನು ಸಲ್ಲಿಸಬೇಕಾಗಿರುತ್ತದೆ. ಅರ್ಜಿಯನ್ನು ಜಿಲ್ಲಾಧಿಕಾರಿಗಳ ಕಛೇರಿಯಿಂದ ಒದಗಿಸಲಾಗುವುದಿಲ್ಲ ಹಾಗೂ ಯಾವುದೇ ಕಾರಣಕ್ಕೂ ಸಹ ನೋಂದಾಯಿತ/ಸಾಮಾನ್ಯ ಅಂಚೆ, ಕೊರಿಯರ್ ಅಥವಾ ಇಮೇಲ್ ಮೂಲಕ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ. ಅಭ್ಯರ್ಥಿಯು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರ ಅಧಿಕೃತ ವೆಬ್ ಸೈಟ್ http://cbpur-va.kar.nic.in ನ ಆನ್‌ಲೈನ್ ಮುಖಾಂತರ ಗ್ರಾಮಲೆಕ್ಕಿಗರ ನೇರನೇಮಕಾತಿ ಅರ್ಜಿ ತುಂಬುವುದು ರ ಮೇಲೆ ಕ್ಲಿಕ್ ಮಾಡಿದಾಗ ತೆರೆದ ಕಂಪ್ಯೂಟರ್ ಪರದೆಯ ಮೇಲೆ ಅರ್ಜಿಯನ್ನು ತುಂಬಬೇಕು. ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಯು submit button ನ್ನು ಒತ್ತಿದರೆ ಅರ್ಜಿ ಸಂಖ್ಯೆ: (reference number) ಜನರೇಟ್ ಆಗುತ್ತದೆ. ಆನ್‌ಲೈನ್ ಅರ್ಜಿಯನ್ನು ಭರ್ತಿ ಮಾಡಿದ ನಂತರ ಅಭ್ಯರ್ಥಿಗಳು ಸ್ವೀಕೃತಿ ಪತ್ರ (Acknowledgement Slip) ಮತ್ತು ಚಲನ್‌ನ ದ್ವಿಪ್ರತಿಗಳನ್ನು ತೆಗೆದುಕೊಳ್ಳತಕ್ಕದ್ದು. ಈ ಚಲನ್‌ನ್ನು ಅರ್ಜಿ ಶುಲ್ಕದೊಂದಿಗೆ ಸ್ಟೇಟ್ ಬ್ಯಾಂಕ್ ಆಫ್ ಮೈಸೂರ್‌ನ ಯಾವುದೇ ಶಾಖೆಯಲ್ಲಿ ಪಾವತಿಸಬಹುದು. ಪಾವತಿಸುವಾಗ ಚಲನ್‌ನಲ್ಲಿ ಅರ್ಜಿಯ ಸಂಖ್ಯೆ (reference number) ಮತ್ತು ಅಭ್ಯರ್ಥಿಯ ಹೆಸರು ಸರಿಯಾಗಿ ನಮೂದಾಗಿದೆಯೇ? ಎಂದು ಅಭ್ಯರ್ಥಿಯು ಪರಿಶೀಲಿಸಿ ದೃಢಪಡಿಸಿಕೊಳ್ಳತಕ್ಕದ್ದು. ಅಭ್ಯರ್ಥಿಗಳು ಸ್ವೀಕೃತಿ ಪತ್ರವನ್ನು ಮತ್ತು ಚಲನ್‌ಪಾವತಿಯ ಒಂದು ಪ್ರತಿಯನ್ನು ಕಡ್ಡಾಯವಾಗಿ ತಮ್ಮ ಬಳಿ ಇರಿಸಿಕೊಳ್ಳತಕ್ಕದ್ದು. ಅರ್ಜಿ ಶುಲ್ಕದ ಜೊತೆಗೆ ಬ್ಯಾಂಕ್ ಸರ್ವೀಸ್ ಚಾರ್ಜ್‌ನ್ನು ಸಹಾ ಅಭ್ಯರ್ಥಿಗಳು ಬ್ಯಾಂಕ್‌ಗೆ ಪಾವತಿಸತಕ್ಕದ್ದು. ಈ ದಾಖಲೆಗಳನ್ನು ಅಭ್ಯರ್ಥಿಗಳ ಮೂಲ ದಾಖಲೆಗಳ ಪರಿಶೀಲನೆಗೆ ನಿಗಧಿಪಡಿಸಿದ ದಿನಾಂಕದಂದು ಹಾಜರುಪಡಿಸತಕ್ಕದ್ದು.

**ಅರ್ಜಿ ಶುಲ್ಕದ ವಿವರ :** ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1 ಹಾಗೂ ಮಹಿಳಾ ಅಭ್ಯರ್ಥಿಗಳಿಗೆ ರೂ. 250/– ಹಾಗೂ ಇತರರಿಗೆ ರೂ. 500/– ಗಳನ್ನು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರ State Bank of Mysore, Chickballapur ಶಾಖೆಯಲ್ಲಿನ ಉಳಿತಾಯ ಖಾತೆ ಸಂಖ್ಯೆ : **64030323576 ಗೆ (IFSC codeSBMY0040082)** ಅರ್ಜಿ ಸಲ್ಲಿಸಲು ನಿಗಧಿಪಡಿಸಿದ ಕೊನೆಯ ದಿನಾಂಕಕ್ಕೆ ಮುಂಚೆ ಪಾವತಿ ಮಾಡಿ ಚಲನ್ ಸಂಖ್ಯೆಯನ್ನು ಅರ್ಜಿಯಲ್ಲಿ ದಿನಾಂಕದ ಸಹಿತ ತಪ್ಪದೆ ನಮೂದಿಸುವುದು. ನಿಗದಿತ ಶುಲ್ಕ ಪಾವತಿಸದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

**ಅನ್‌ಲೈನ್ ಮೂಲಕ ಶುಲ್ಕದೊಂದಿಗೆ ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ: 21/07/2014 ಆಗಿರುತ್ತದೆ.**

5. **ವಯೋಮಿತಿ** : ಅರ್ಜಿಗಳನ್ನು ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಟ 18 ವರ್ಷವಯಸ್ಸು ಪೂರೈಸಿರತಕ್ಕದ್ದು. ಗರಿಷ್ಠ ವಯೋಮಿತಿ ಈ ಕೆಳಕಂಡಂತಿರತಕ್ಕದ್ದು.

| | |
|---|---|
| ಸಾಮಾನ್ಯ ವರ್ಗ | 35 ವರ್ಷ |
| 2ಎ, 2ಬಿ, 3ಎ, 3ಬಿ ಪ್ರವರ್ಗಗಳು | 38 ವರ್ಷ |
| ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡ/ ಪ್ರವರ್ಗ–1 | 40 ವರ್ಷ |
| ವಿಧವೆಯರು/ಅಂಗವಿಕಲ/ಜೀತಮುಕ್ತರು | ಚಾಲ್ತಿಯಲ್ಲಿ ನಿಗದಿಪಡಿಸಿರುವ ಗರಿಷ್ಠ ವಯೋಮಿತಿಗೆ 10 ವರ್ಷ ಹೆಚ್ಚಿಗೆ ಸೇರಿಸಿಕೊಳ್ಳಲಾಗುವುದು. |
| ಮಾಜಿ ಸೈನಿಕರು | ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವವರೋ ಅದಕ್ಕೆ 3 ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷ |

ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ವಿದ್ಯಾರ್ಹತೆಯ ಪ್ರಮಾಣ ಪತ್ರದಲ್ಲಿ ನಮೂದಿಸಿರುವಂತೆ ಜನ್ಮ ದಿನಾಂಕವನ್ನು ಪರಿಗಣಿಸಲಾಗುವುದು. ಇತರೆ ಯಾವುದೇ ದಾಖಲೆಗಳನ್ನು ಪರಿಗಣಿಸಲಾಗುವುದಿಲ್ಲ.

ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) 1977 ರ ನಿಯಮಾವಳಿಗಳ ನಿಯಮ 6 ರಂತೆ ಗರಿಷ್ಠ ವಯೋಮಿತಿಯನ್ನು ಈ ಮುಂದಿನ ಪ್ರಕರಣಗಳಲ್ಲಿ ಮುಂದೆ ಹೇಳಿರುವಷ್ಟರ ಮಟ್ಟಿಗೆ ಹೆಚ್ಚಿಸಲು ಅವಕಾಶವಿದೆ.

ಎ) ಸರ್ಕಾರ ಅಥವಾ ಸ್ಥಳೀಯ ಪ್ರಾಧಿಕಾರ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪಿಸಲಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಅಡಿಯಲ್ಲಿ ಸರ್ಕಾರದಿಂದ ಸ್ಥಾಪಿತವಾಗಿದ್ದು ಮತ್ತು ಸರ್ಕಾರವು ಒಡೆತನ ಹೊಂದಿರುವ ಅಥವಾ ನಿಯಂತ್ರಣ ಹೊಂದಿರುವ ನಿಗಮದ ಅಡಿಯಲ್ಲಿ ಹುದ್ದೆಯನ್ನು ಧಾರಣ ಮಾಡಿರುವ ಅಥವಾ ಧಾರಣ ಮಾಡಿದ ಅಭ್ಯರ್ಥಿಯ ಸಂದರ್ಭದಲ್ಲಿ ಆತ ಅಂಥ ಹುದ್ದೆಯನ್ನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ಅಥವಾ (ಹತ್ತು) ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಬಿ) ಈ ರಾಜ್ಯದಲ್ಲಿರುವ ಭಾರತ ಸರ್ಕಾರ ಜನಗಣತಿ ಸಂಸ್ಥೆಯಲ್ಲಿ ಹುದ್ದೆಯನ್ನು ಧಾರಣೆ ಮಾಡಿರುವ ಅಥವಾ ಧಾರಣ ಮಾಡಿದ್ದ ಅಭ್ಯರ್ಥಿಯ ಸಂದರ್ಭದಲ್ಲಿ ಅಂಥ ಹುದ್ದೆಯನ್ನು ಆತನು ಧಾರಣೆ ಮಾಡಿರುವಷ್ಟು ಅಥವಾ ಧಾರಣೆ ಮಾಡಿದಷ್ಟು ವರ್ಷಗಳು ಅಥವಾ ಐದು ವರ್ಷಗಳು ಇವುಗಳಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

ಅ) **ಮಾಜಿ ಸೈನಿಕರು :** ಅಭ್ಯರ್ಥಿಯು ಮಾಜಿ ಸೈನಿಕನಾಗಿದ್ದಲ್ಲಿ ಅವರು ಸಶಸ್ತ್ರ ದಳದಲ್ಲಿ ಎಷ್ಟು ವರ್ಷ ಸೇವೆ ಸಲ್ಲಿಸಿರುವರೊ ಅಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು.

ಮಾಜಿ ಸೈನಿಕ ಎಂದರೆ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯುದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಾಗಿಲ್ಲದೆ) ಸೇವೆ ಸಲ್ಲಿಸಿದ ವ್ಯಕ್ತಿ ಎಂದು ಅರ್ಥ. ಅಂದರೆ ಡಿಫೆನ್ಸ್, ಸೆಕ್ಯೂರಿಟಿಕೋರ್, ಜನರಲ್ ರಿಸರ್ವ್ ಇಂಜಿನೀಯರಿಂಗ್ ಫೋರ್ಸ್, ಲೋಕ ಸಹಾಯಕ ಸೇನಾ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ.

ಮತ್ತು (ಬಿ) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಲಿಕೆಯನ್ನು ನೀಡಲಾಗುವುದಿಲ್ಲ.

ಆ) ಅಂತಹ ಸೇನೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ ಅಥವಾ

ಇ) ಸೈನಿಕ ಸೇವೆಯಿಂದ ಉಂಟಾದ ವೈದ್ಯಕೀಯ ಕಾರಣಗಳು ಅಥವಾ ಆತನ ನಿಯಂತ್ರಣ ಮೀರಿದ ಪರಿಸ್ಥಿತಿಗಳ ಮೇಲೆ ಅಂಥ ಸೇವೆಯಿಂದ ಬಿಡುಗಡೆ ಮಾಡಿರುವ ಮತ್ತು ವೈದ್ಯಕೀಯ ಅಥವಾ ಇತರ ಅಸಮರ್ಥತಾ ನಿವೃತ್ತಿ ವೇತನವನ್ನು ನೀಡಲಾಗಿರುವ ವ್ಯಕ್ತಿಯನ್ನು ಅಥವಾ

ಈ) ಆತನ ವೈಯಕ್ತಿಕ ಕೋರಿಕೆಯ ಮೇಲಲ್ಲದೆ ಸಿಬ್ಬಂದಿ ಸಂಖ್ಯೆ ಕಡಿತದ ಪ್ರತಿಫಲವಾಗಿ ಅಂಥ ಸೇವೆಯಿಂದ ಆತನನ್ನು ಬಿಡುಗಡೆಗೊಳಿಸಿರುವ ವ್ಯಕ್ತಿಯನ್ನು ಅಥವಾ

ಉ) ಆತನ ವೈಯಕ್ತಿಕ ಕೋರಿಕೆ ಮೇಲಲ್ಲದೆ ಅಥವಾ ದುರ್ವರ್ತನೆ ಅಥವಾ ಅದಕ್ಷತೆಯ ಕಾರಣದಿಂದಾಗಿ ವಜಾಗೊಳಿಸುವ ಅಥವಾ ತೆಗೆದುಹಾಕುವ ಮೂಲಕವಲ್ಲದೆ, ಅನ್ಯಥಾ ನಿಯೋಜಿಸಲಾದ ನಿರ್ಧಿಷ್ಟ ಅವಧಿ ಮುಕ್ತಾಯವಾದ ತರುವಾಯ ಅಂಥ ಸೇವೆಯಿಂದ ಬಿಡುಗಡೆಗೊಳಿಸಿರುವ ಮತ್ತು ಉಪದಾನ ನೀಡಿರುವ ವ್ಯಕ್ತಿಯನ್ನು ಮತ್ತು ಗ್ರಾಚುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾದೇಶಿಕ ಸೇನೆಯ ಮುಂದಿನ ಪ್ರವರ್ಗಗಳ ಸಿಬ್ಬಂದಿ ಎಂದರೆ.

1. ನಿರಂತರ ಸಂಚಿತ ಸೇವೆ ಸಂಬಂಧಿಸಿದ ನಿವೃತ್ತಿ ವೇತನದಾರ
2. ಸೈನಿಕ ಸೇವೆಯ ಕಾರಣದಿಂದ ಅಂಗವಿಕಲರಾದ ವ್ಯಕ್ತಿಗಳನ್ನು ಮತ್ತು
3. ಶೌರ್ಯ ಪ್ರಶಸ್ತಿ ವಿಜೇತರು –ಒಳಗೊಳ್ಳುತ್ತದೆ.

**ಸಿ) ಸರ್ಕಾರಿ ನೌಕರ :**

ಅಭ್ಯರ್ಥಿಯು ಕರ್ನಾಟಕ ರಾಜ್ಯ ಸರ್ಕಾರದ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ್ದಲ್ಲಿ ಗರಿಷ್ಠ ವಯೋಮಿತಿಯನ್ನು ಅವನು/ಅವಳು ಎಷ್ಟು ವರ್ಷಗಳ ಅವಧಿಗೆ ಆ ಹುದ್ದೆಯಲ್ಲಿ ಸೇವೆ ಸಲ್ಲಿಸುತ್ತಿರುವರೋ ಅಥವಾ ಹಿಂದೆ ಸಲ್ಲಿಸಿದ್ದರೂ ಅಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು.

**ಡಿ) ಅಂಗವಿಕಲ ಅಭ್ಯರ್ಥಿಗಳು :**

ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ನಿಯಮ 9(1–ಎ) ರ ಅನ್ವಯ ರಾಜ್ಯ ಸಿವಿಲ್ ಸೇವೆಯಲ್ಲಿನ ಗ್ರೂಪ್–ಸಿ ಹುದ್ದೆಗಳ ನೇರ ನೇಮಕಾತಿಯಲ್ಲಿ ಅಂಗವಿಕಲರಿಗೆ ಶೇ. 5 ರಷ್ಟು ಸಮತಳ ಮೀಸಲಾತಿ ಕಲ್ಪಿಸಲಾಗಿದೆ. ಸರ್ಕಾರದ ಆದೇಶ ಸಂಖ್ಯೆ: ಡಿಪಿಎಆರ್.52.ಎಸ್‌ಆರ್‌ಆರ್.59, ದಿನಾಂಕ: 29/11/2002 ರಂತೆ ಮೀಸಲಾತಿ ನೀಡಲಾಗುವುದು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಎ.115.ಸೆನೆನಿ.2005, ದಿನಾಂಕ: 19/11/2005 ರಲ್ಲಿ ನಿಗಧಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಸಂಬಂಧಪಟ್ಟ ಜಿಲ್ಲಾಮಟ್ಟದ ವೈದ್ಯಕೀಯ ಮಂಡಳಿಯು ನೀಡುವ ಮೂಲ ಪ್ರಮಾಣ ಪತ್ರವನ್ನು ಹಾಗೂ ದೃಢೀಕೃತ ಪ್ರತಿಯನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು. ಬೇರೆ ಯಾವುದೇ ನಮೂನೆಗಳಲ್ಲಿ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು ಪರಿಗಣಿಸಲಾಗುವುದಿಲ್ಲ. ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.52.ಎಸ್‌ಆರ್‌ಆರ್.99, ದಿನಾಂಕ: 29/11/2002 ಮತ್ತು ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಡಿಪಿಎಆರ್.54.ಎಸ್‌ಆರ್‌ಆರ್.2012, ದಿನಾಂಕ: 23/06/2012 ರ ರೀತ್ಯಾ ಗ್ರಾಮಲೆಕ್ಕಿಗರ ಹುದ್ದೆಗಳಲ್ಲಿ ನಿಗಧಿತ ಪ್ರಮಾಣದ ಅಂಗವೈಕಲ್ಯವುಳ್ಳ ಅಂಗವಿಕಲರ ಮೀಸಲಾತಿಯನ್ನು ಈ ಕೆಳಕಂಡ ವರ್ಗಗಳಿಗೆ ಮಾತ್ರ ಕಲ್ಪಿಸಲಾಗಿದೆ.

1. ಕುಷ್ಠ ರೋಗದಿಂದ ಗುಣಮುಖರಾದವರು (Leprosy Cured)
2. ಶ್ರವಣ ದೋಷವುಳ್ಳವರು (Hearing impaired)
3. ದೈಹಿಕ ಅಂಗವಿಕಲರು (Locomotor disability)
4. ಮಾನಸಿಕ ಅಸ್ವಸ್ಥತೆ (Mentally ill)

ಈ ಮೇಲಿನ ಅಂಗವಿಕಲರನ್ನು ಹೊರತುಪಡಿಸಿ ಇತರೆ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಗ್ರಾಮಲೆಕ್ಕಿಗರ ಹುದ್ದೆಗೆ ಅರ್ಜಿ ಸಲ್ಲಿಸಲು ಅರ್ಹರಿರುವುದಿಲ್ಲ ಹಾಗೂ ಈ ವರ್ಗದ ಅಂಗವಿಕಲ ಅಭ್ಯರ್ಥಿಗಳು ಗ್ರಾಮಲೆಕ್ಕಾಧಿಕಾರಿಗಳ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುವ ಕನಿಷ್ಠ ಸಾಮರ್ಥ್ಯ ಹೊಂದಿರಬೇಕಾಗಿರುತ್ತದೆ.

**6. ಜಾತಿ/ಮೀಸಲಾತಿ ಪ್ರಮಾಣ ಪತ್ರಗಳು:**

ಜಾತಿ ಮೀಸಲಾತಿ ಕೋರಬಯಸುವ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ ಅಭ್ಯರ್ಥಿಗಳು ನಮೂನೆ–ಡಿ ರಲ್ಲಿ, ಪ್ರವರ್ಗ–1, ಅಭ್ಯರ್ಥಿಗಳು ನಮೂನೆ–ಇ ನಲ್ಲಿ ಹಾಗೂ 2ಎ, 2ಬಿ, 3ಎ, 3ಬಿ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು. ಈ ಪ್ರಮಾಣ ಪತ್ರವು ಈ ಹುದ್ದೆಗೆ ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದಿರಬೇಕು/ಚಾಲ್ತಿಯಲ್ಲಿರಬೇಕು, ನಂತರ ಪಡೆದ ಪ್ರಮಾಣ ಪತ್ರಗಳನ್ನು ಪರಿಗಣಿಸುವುದಿಲ್ಲ.

**7. ಯೋಜನೆ ನಿರಾಶ್ರಿತರಾದ ಕುಟುಂಬದ ಅಭ್ಯರ್ಥಿಗಳು :**

ಯೋಜನೆಗಳಿಂದ ನಿರ್ವಸಿತರಾದ ಕುಟುಂಬದ ಅಭ್ಯರ್ಥಿಗಳಿಗೆ ಮೀಸಲಿರಿಸಿದ ಹುದ್ದೆಗಳನ್ನು ಕೋರುವ ಅಭ್ಯರ್ಥಿಗಳು ಸಂಬಂಧಿಸಿದ ತಹಶೀಲ್ದಾರ್ ರವರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.23.ಎಸ್‌ಆರ್‌ಆರ್.99, ದಿನಾಂಕ: 23/11/2000 ರನ್ವಯ ಈ ಮೀಸಲಾತಿಯಡಿಯಲ್ಲಿ ಕ್ಲೈಮು ಮಾಡುವ ಅಭ್ಯರ್ಥಿಗಳು ಸರ್ಕಾರದ ಆದೇಶದ ಸಂಖ್ಯೆ: ಸಿಆಸುಇ.44.ಸೆಸೇನಿ.2001, ದಿನಾಂಕ: 27/07/2001 ರಲ್ಲಿ ತಿಳಿಸಿರುವಂತೆ ನಿಗದಿತ ನಮೂನೆಯಲ್ಲಿ ಸಲ್ಲಿಸತಕ್ಕದ್ದು.

**8. ಮಾಜಿ ಸೈನಿಕರ ಕುಟುಂಬದ ಅಭ್ಯರ್ಥಿಗಳು :**

ಮಾಜಿ ಸೈನಿಕರು ಎನ್ನುವ ಬಗ್ಗೆ ಅಥವಾ ಭಾರತ ದೇಶದ ಒಕ್ಕೂಟದ ಸಶಸ್ತ್ರ ದಳದಲ್ಲಿ ಸೇವೆ ಸಲ್ಲಿಸುತ್ತಿರುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ಅಂಗಹೀನರಾದ ವ್ಯಕ್ತಿಗಳ ಕುಟುಂಬದ ಸದಸ್ಯರು ಎಂಬ ಬಗ್ಗೆ ಸಕ್ಷಮ ಮಿಲಿಟರಿ ಅಧಿಕಾರಿಗಳಿಂದ/ಸಕ್ಷಮ ಪ್ರಾಧಿಕಾರದಿಂದ ಪ್ರಮಾಣ ಪತ್ರವನ್ನು ಪಡೆದಿರಬೇಕು.

**9. ಗ್ರಾಮೀಣ ಅಭ್ಯರ್ಥಿಗಳು :**

ಗ್ರಾಮೀಣ ಅಭ್ಯರ್ಥಿ ಎಂದರೆ ಒಂದು ಹುದ್ದೆಗಾಗಿ ನಿಯಮಿಸಲಾದ ಅರ್ಹತಾ ಪರೀಕ್ಷೆಯು ಎಸ್.ಎಸ್.ಎಲ್.ಸಿ., ಅಥವಾ ಉನ್ನತ ಪರೀಕ್ಷೆಯಾಗಿದ್ದಲ್ಲಿ 1ನೇ ತರಗತಿಯಿಂದ 10ನೇ ತರಗತಿವರೆಗೆ ಗ್ರಾಮಾಂತರ ಪ್ರದೇಶದಲ್ಲಿ ವ್ಯಾಸಂಗ ಮಾಡಿದ ಬಗ್ಗೆ ವ್ಯಾಸಂಗದ ಪ್ರಮಾಣ ಪತ್ರವನ್ನು ಸಂಬಂಧಪಟ್ಟ ಪ್ರಾಧಿಕಾರಿಯಿಂದ ಪಡೆದು ಲಗತ್ತಿಸತಕ್ಕದ್ದು. ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾಗಿರುವವರು ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳನ್ನು ಕ್ಲೈಮು ಮಾಡುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ನಮೂನೆ–2 ರಲ್ಲಿ ಪ್ರಮಾಣ ಪತ್ರವಲ್ಲದೆ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ–1 ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ಪಡೆದು ಅದರ ಒಂದೊಂದು ಪೋಟೋ ಪ್ರತಿಗಳನ್ನು ಇಟ್ಟುಕೊಂಡಿರಬೇಕು.

ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವು ನಮೂನೆ–2 ರಲ್ಲಿ ನಿಗಧಿತ ಪ್ರಾಧಿಕಾರಿಗಳಿಂದ ಪಡೆದು ಸಂಬಂಧಪಟ್ಟ ಕ್ಷೇತ್ರ ಶಿಕ್ಷಣಾಧಿಕಾರಿಯವರಿಂದ ಮೇಲುರುಜು ಮತ್ತು ಮೊಹರು ಮಾಡಿಸಿಕೊಂಡಿರತಕ್ಕದ್ದು.

**10. ಕನ್ನಡ ಮಾಧ್ಯಮ ಅಭ್ಯರ್ಥಿಗಳು :**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.71.ಎಸ್‌ಆರ್‌ಆರ್.2001, ದಿನಾಂಕ: 24/10/2002 ರಲ್ಲಿ ಹೊರಡಿಸಿದ ಕರ್ನಾಟಕ ಸರ್ಕಾರಿ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ನಿಯಮ (9)(1)(ಸಿ) ರನ್ವಯ ಅಭ್ಯರ್ಥಿಯು 1 ರಿಂದ 10ನೇ ತರಗತಿವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುತ್ತಾರೆ ಎನ್ನುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರು ಪಡೆದ ಪ್ರಮಾಣ ಪತ್ರವನ್ನು ಪಡೆದುಕೊಳ್ಳತಕ್ಕದ್ದು.

**11. ಅರ್ಹತಾ ಷರತ್ತುಗಳು :**

ಅ) ಅರ್ಜಿದಾರರು ಭಾರತೀಯ ನಾಗರೀಕನಾಗಿರತಕ್ಕದ್ದು.

ಆ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯ ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟುಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

ಇ) ದೈಹಿಕವಾಗಿ/ಮಾನಸಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅಭ್ಯರ್ಥಿ ಹುದ್ದೆಗೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

12. **ಪ್ರಮುಖವಾದ ಸೂಚನೆಗಳು :**

ಅಭ್ಯರ್ಥಿಗಳು ಕೆಳಕಂಡ ಪ್ರಮಾಣ ಪತ್ರಗಳನ್ನು ಮೂಲ ದಾಖಲಾತಿ ಪರಿಶೀಲನಾ ಸಮಯದಲ್ಲಿ ಸಲ್ಲಿಸಬೇಕು.

- ಹುದ್ದೆಗೆ ನಿಗಧಿಪಡಿಸಲಾದ ವಿದ್ಯಾರ್ಹತೆಯ ಅಂಕಪಟ್ಟಿ ಪ್ರಮಾಣ ಪತ್ರ ಮತ್ತು ಕಂಪ್ಯೂಟರ್ ಜ್ಞಾನದ ಬಗ್ಗೆ ದಾಖಲೆ.
- ಜನ್ಮ ದಿನಾಂಕವನ್ನು ನಮೂದಿಸಿರುವ ಎಸ್.ಎಸ್.ಎಲ್.ಸಿ., ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ.
- ಸೈನಿಕ ಸೇವೆಯಿಂದ ಬಿಡುಗಡೆಯಾದ/ ಮುಕ್ತಿ ಹೊಂದಿದ ಬಗೆಗಿನ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2, 2ಬಿ, 3ಎ, 3ಬಿ ಮೀಸಲಾತಿಯ ಪ್ರಮಾಣ ಪತ್ರಗಳು (ಮೀಸಲಾತಿ ಕೋರಿದ್ದಲ್ಲಿ)
- ಗ್ರಾಮೀಣ ಮೀಸಲಾತಿ ಪ್ರಮಾಣ ಪತ್ರ ನಮೂನೆ–1 ಮತ್ತು 2 ರಲ್ಲಿ (ಮೀಸಲಾತಿ ಕೋರಿದ್ದಲ್ಲಿ)
- ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿದ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಯೋಜನೆಗಳಿಂದ ನಿರಾಶ್ರಿತರಾದ ಬಗ್ಗೆ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ವಿಧವೆಯಾಗಿದ್ದಲ್ಲಿ ಸಕ್ಷಮ ಪ್ರಾಧಿಕಾರದಿಂದ ಪಡೆದ ಪ್ರಮಾಣ ಪತ್ರ
- ಜಿಲ್ಲಾ ವೈದ್ಯಕೀಯ ಮಂಡಳಿಯಿಂದ ಪಡೆದ ದೃಢೀಕರಣ ಪತ್ರ ಮತ್ತು ಅಂಗವಿಕಲ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿ ಕೋರಿದ್ದಲ್ಲಿ)
- ಹೈದರಾಬಾದ್–ಕರ್ನಾಟಕ ಪ್ರದೇಶದ ಸ್ಥಳೀಯ ಅಭ್ಯರ್ಥಿಗಳಾಗಿ ಮೀಸಲಾತಿ ಕ್ಲೈಮು ಮಾಡಿದಲ್ಲಿ ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್.ಪಿಎಲ್‌ಎಸ್.2012, ಬೆಂಗಳೂರು, ದಿನಾಂಕ: 06/11/2013 ರಲ್ಲಿ ಗೊತ್ತುಪಡಿಸಿರುವ ನಮೂನೆ–ಎ, ಬಿ, ಸಿ, ಡಿ ಮತ್ತು ಇ ರಲ್ಲಿ ಯಾವುದು ಅನ್ವಯವಾಗುವುದೋ ಆ ನಮೂನೆಯಲ್ಲಿ ದೃಢೀಕರಣ ಪತ್ರ.

13. **ದುರ್ನಡತೆ :**

ಒಬ್ಬ ಅಭ್ಯರ್ಥಿಯು ನಕಲಿ ವ್ಯಕ್ತಿಯಾಗಿರುವನೆಂದು ಅಥವಾ ಖೋಟಾ ದಸ್ತಾವೇಜು ಅಥವಾ ತಿದ್ದಲಾದ ದಸ್ತಾವೇಜುಗಳನ್ನು ಸಲ್ಲಿಸಿರುವನೆಂದು ಅಥವಾ ತಪ್ಪು ಅಥವಾ ಸುಳ್ಳು ಹೇಳಿಕೆ ನೀಡಿರುವನೆಂದು ಅಥವಾ ವಾಸ್ತವಿಕ ಮಾಹಿತಿಯನ್ನು ಮರೆಮಾಚಿರುವನೆಂದು ಅಥವಾ ಅವರ ನೇಮಕಾತಿಯ ಸಂಬಂಧದಲ್ಲಿ ಯಾವುದೇ ಇತರ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸಿರುವುದು ಅಥವಾ ನಕಲಿ ಅಂಕಪಟ್ಟಿ/ದೃಢೀಕರಣ ಪತ್ರ ಸಲ್ಲಿಸುವುದು ಇತ್ಯಾದಿ ಕಂಡು ಬಂದಲ್ಲಿ ಅವನು/ಅವಳು ಸ್ವತಃ ಕ್ರಿಮಿನಲ್ ವ್ಯವಹರಣೆಗಳಿಗೆ ಮತ್ತು ಶಿಸ್ತು ಕ್ರಮಕ್ಕೆ ಒಳಪಡುವುದಲ್ಲದೆ, ಹುದ್ದೆಯ ಆಯ್ಕೆಯಿಂದ ಅಭ್ಯರ್ಥಿತ್ವವನ್ನು ರದ್ದುಪಡಿಸಲಾಗುವುದು.

14. **ಇತರೆ ಸೂಚನೆಗಳು :**

1. ಅಭ್ಯರ್ಥಿಗಳಿಗೆ ಕನ್ನಡ ಭಾಷಾ ಜ್ಞಾನದ ಅರಿವು ಅವಶ್ಯಕತೆ ಕಡ್ಡಾಯವಾಗಿರುತ್ತದೆ.
2. ನೇಮಕಾತಿ ಪ್ರಕ್ರಿಯೆ ಪೂರ್ಣಗೊಳ್ಳುವ ಮುನ್ನ ಯಾವುದೇ ಸಂದರ್ಭದಲ್ಲಿ ಹುದ್ದೆಗಳ ಸಂಖ್ಯೆಯನ್ನು ಹೆಚ್ಚು ಮಾಡುವ/ಕಡಿತಗೊಳಿಸುವ ಅಥವಾ ನಿಯಮಾನುಸಾರ ಅಗತ್ಯವಾದ ಯಾವುದೇ ಹೆಚ್ಚುವರಿ ಷರತ್ತುಗಳನ್ನು ವಿಧಿಸುವ ಅಥವಾ ಸಡಿಲಗೊಳಿಸುವ ಅಥವಾ ಅಧಿಸೂಚನೆಗೆ ಯಾವುದೇ ಬದಲಾವಣೆ ಮಾಡುವ ಅಧಿಕಾರ ಹಾಗೂ ಯಾವುದೇ ಕಾರಣ ನೀಡದೆ ನೇಮಕಾತಿ ಪ್ರಕ್ರಿಯೆಯನ್ನು ರದ್ದುಪಡಿಸುವ ಅಧಿಕಾರ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.
3. ಸರ್ಕಾರಿ ಇಲಾಖೆಯಲ್ಲಿ ಸೇವೆ ಸಲ್ಲಿಸುತ್ತಿರುವ ಅಭ್ಯರ್ಥಿಗಳು ಅರ್ಜಿಯನ್ನು ಇಲಾಖಾ ಮುಖ್ಯಸ್ಥರ ಅನುಮತಿ ಪಡೆದು ಸಲ್ಲಿಸುವುದು.
4. ಮೀಸಲಾತಿಯಡಿಯಲ್ಲಿ ಆಯ್ಕೆಯಾದ ಅಭ್ಯರ್ಥಿಗಳು ಜಾತಿ ಪ್ರಮಾಣ ಪತ್ರದ ಬಗ್ಗೆ ಜಿಲ್ಲಾಧಿಕಾರಿಗಳು (ಅಧ್ಯಕ್ಷರು, ಜಾತಿ ಮತ್ತು ಆದಾಯ ಪರಿಶೀಲನಾ ಸಮಿತಿ) ರವರಿಂದ ಸಿಂಧುತ್ವ ಪ್ರಮಾಣ ಪತ್ರ ಪಡೆದ ನಂತರ ನೇಮಕಾತಿ ಆದೇಶ ನೀಡಲಾಗುವುದು.
5. ಆಯ್ಕೆ ಮತ್ತು ನೇಮಕಾತಿ ಬಗ್ಗೆ ಅಂತಿಮ ತೀರ್ಮಾನವನ್ನು ನೇಮಕಾತಿ ಪ್ರಾಧಿಕಾರಿಯಾದ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ರವರು ಕಾಯ್ದಿರಿಸಿಕೊಂಡಿರುತ್ತಾರೆ.
6. ಕಾಲೇಜಿನ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರ ಹಾಗೂ ಸ್ಥಳೀಯ ಇಬ್ಬರು ಗಣ್ಯ ವ್ಯಕ್ತಿಗಳಿಂದ ಪಡೆದ 6 ತಿಂಗಳೊಳಗಿನ ಇತ್ತೀಚಿನ ನಡತೆ ಪ್ರಮಾಣ ಪತ್ರ ಲಗತ್ತಿಸಬೇಕು.
7. ಅಭ್ಯರ್ಥಿಗಳು ಆನ್‌ಲೈನ್‌ನಲ್ಲಿ ಪಡೆದ Acknowledgement ಹಾಗೂ Challan ನ್ನು ಬ್ಯಾಂಕ್‌ನಲ್ಲಿ ಪಾವತಿಸಿದ ನಂತರ ಅಭ್ಯರ್ಥಿಯ ಪ್ರತಿಯನ್ನು ಮಡಚುವುದಾಗಲೀ, ಹರಿಯುವುದಾಗಲೀ ಮಾಡದೇ ಹಾಳಾಗದಂತೆ ಎಚ್ಚರವಹಿಸತಕ್ಕದ್ದು.
8. ಕರ್ನಾಟಕ ಜನರಲ್ ಸರ್ವೀಸ್ (Revenue Sub-ordinated) (Cadre & Recruitment) (ತಿದ್ದುಪಡಿ) ನಿಯಮಗಳು–2008 ಮತ್ತು ಕರ್ನಾಟಕ ನಾಗರೀಕ ಸೇವಾ (ಸಾಮಾನ್ಯ ನೇಮಕಾತಿ) ನಿಯಮಗಳು–1977 ರ ಪ್ರಕಾರ ಅಭ್ಯರ್ಥಿಯನ್ನು ಅವರು ಪಿ.ಯು.ಸಿ. ಅಥವಾ ಸಿಬಿಎಸ್‌ಸಿ. ಅಥವಾ ಐಸಿಎಸ್‌ಇ ನಡೆಸುವ 12ನೇ ತರಗತಿ ಪರೀಕ್ಷೆಯಲ್ಲಿ ಪಡೆದ ಅಂಕಗಳ (on merit) ಮತ್ತು ಮೀಸಲಾತಿ ಆಧಾರದ ಮೇಲೆ ಮಾತ್ರ ಆಯ್ಕೆ ಮಾಡಲಾಗುವುದು. ಯಾವುದೇ ಇತರೆ ತತ್ಸಮಾನ ವಿದ್ಯಾರ್ಹತೆ ಅಥವಾ ಮುಕ್ತ ವಿದ್ಯಾಲಯದಿಂದ ನೀಡಲಾದ ಪ್ರಮಾಣ ಪತ್ರಗಳನ್ನು ಹಾಗೂ ಗಳಿಸಿದ ಅಂಕಗಳನ್ನು ಪರಿಗಣಿಸಲಾಗುವುದಿಲ್ಲ.
9. 1:5 ಅನುಪಾತದಲ್ಲಿ Provisional ಪಟ್ಟಿ ಪ್ರಕಟಿಸಲಾಗುವುದು ಹಾಗೂ ಅಭ್ಯರ್ಥಿಯ ಹೆಸರು Provisional List ನಲ್ಲಿ ನಮೂದಿಸಿದ ಮಾತ್ರಕ್ಕೆ ಅವರ ಆಯ್ಕೆ ಅಂತಿಮವಾಗಿದೆ ಎಂದು ಭಾವಿಸತಕ್ಕದ್ದಲ್ಲ. ಆಯ್ಕೆಯ ಸಂಬಂಧವಾಗಿ ಈ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರ ನಡೆಸಲು ಅವಕಾಶ ಇರುವುದಿಲ್ಲ.

10. ಅಂತಿಮವಾಗಿ ಅಭ್ಯರ್ಥಿಗಳಿಗೆ ನೇಮಕಾತಿ ಆದೇಶಗಳನ್ನು ನೀಡುವ ಮುನ್ನ ಯಾವುದೇ ಹಂತದಲ್ಲಿ ಯಾವುದೇ ಕಾರಣ/ಮಾಹಿತಿ ನೀಡದೆ ಈ ನೇಮಕಾತಿ ಪ್ರಕ್ರಿಯೆಯನ್ನು ಮುಂದೂಡುವ ಅಥವಾ ರದ್ದುಪಡಿಸುವ ಅಥವಾ ವಿಧಿಸಲಾಗಿರುವ ಯಾವುದೇ ಷರತ್ತನ್ನು ಸಡಿಲಗೊಳಿಸುವ ಅಥವಾ ಹೆಚ್ಚುವರಿ ಷರತ್ತನ್ನು ವಿಧಿಸುವ, ತುಂಬಲಾಗುವ ಹುದ್ದೆಗಳ ಸಂಖ್ಯೆಯನ್ನು ಬದಲಾಯಿಸುವ/ನಿರ್ಣಯಿಸುವ ಅಧಿಕಾರವನ್ನು ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ ರವರು ಕಾಯ್ದಿರಿಸಿಕೊಂಡಿರುತ್ತಾರೆ.

**ಡಾ|| ವಿಶಾಲ್ ಆರ್., ಭಾ.ಆ.ಸೇ.,**
ಅಧ್ಯಕ್ಷರು
ಗ್ರಾಮಲೆಕ್ಕಿಗರ ನೇಮಕಾತಿ ಮತ್ತು ಆಯ್ಕೆ ಪ್ರಾಧಿಕಾರ
ಹಾಗೂ ಜಿಲ್ಲಾಧಿಕಾರಿಗಳು, ಚಿಕ್ಕಬಳ್ಳಾಪುರ ಜಿಲ್ಲೆ.

**PR-61**
**SC-50**

## FORM IV

**(See Rule 12)**

**NOTICE**

It is hereby notified that the undersigned has changed his/her name from **RUBEENA NAZIR AHMED MOMIN to REBEENA MAHABOOBSAHEB SAYED**

**RUBEENA NAZIR AHMED MOMIN**

**PD C/n- 83**
**SC-10**

## FORM IV

**(See Rule 12)**

**NOTICE**

It is hereby notified that the undersigned has changed her name from **RENUKA VENKATESH RAGHUNATHI to RENUKA MOHAN NAIK**

**RENUKA VENKATESH RAGHUNATHI**

**PD C/n- 84**
**SC-10**

## ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬಾಗಲಕೋಟ.

**ಅಧಿಸೂಚನೆ ಸಂಖ್ಯೆ : 01/2014, ದಿನಾಂಕ: 18-06-2014.**

**ವಿಷಯ :** ಹಿಂಬಾಕಿ ಉಳಿದ ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ ಹುದ್ದೆಗಳಿಗೆ ನೇರ ನೇಮಕಾತಿ.

**ಉಲ್ಲೇಖ :** 1) ಈ ನ್ಯಾಯಾಲಯದ ಕಚೇರಿ ಟಿಪ್ಪಣಿ ದಿನಾಂಕ: 20-10-2012, 22-10-2013 ಮತ್ತು ಅಧಿಸೂಚನೆ ಸಂಖ್ಯೆ: 02/2012, ದಿನಾಂಕ:20-10-2012 ಮತ್ತು ಅಧಿಸೂಚನೆ ಸಂಖ್ಯೆ: 02/2013, ದಿನಾಂಕ:22-10-2013.

2) ಈ ನ್ಯಾಯಾಲಯದ ಕಚೇರಿ ಟಿಪ್ಪಣಿ ದಿನಾಂಕ: 18-06-2014.

ಬಾಗಲಕೋಟ ಜಿಲ್ಲೆಯ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಹಿಂಬಾಕಿ ಉಳಿದ "ಶೀಘ್ರಲಿಪಿಗಾರರ ಮತ್ತು ಬೆರಳಚ್ಚುಗಾರರ" ಹುದ್ದೆಗಳಿಗಾಗಿ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸಿದ್ದು, ಇಚ್ಛೆಯುಳ್ಳ ಅಭ್ಯರ್ಥಿಗಳು ಎಲ್ಲ ಅಂಕಣಗಳನ್ನು ಭರ್ತಿ ಮಾಡಿ ಅರ್ಜಿಯ ಜೊತೆಗೆ ದಾಖಲಾತಿಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸಿ, ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ, ಇವರಿಗೆ ನಿಗದಿತ ಅವಧಿಯೊಳಗಾಗಿ ಸಲ್ಲಿಸತಕ್ಕದ್ದು.

**ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕ: 19-07-2014. ಸಾಯಂಕಾಲ 05-00 ಗಂಟೆ**

**1) ನೇರ ನೇಮಕಾತಿಗಾಗಿ ನಿಗದಿಪಡಿಸಿದ ಹುದ್ದೆಗಳ ಸಂಖ್ಯೆ ಹಾಗೂ ವರ್ಗೀಕರಣ:-**

| ಕ್ರ. ಸಂ. | ಹುದ್ದೆ ಮತ್ತು ವೇತನ ಶ್ರೇಣಿ | ಒಟ್ಟು ಹುದ್ದೆಗಳು | | ವರ್ಗೀಕರಣ | | | | | |
|---|---|---|---|---|---|---|---|---|---|
| | | | | ಇತರೆ | ಗ್ರಾಮೀಣ | ಮಹಿಳೆ | ಅಂಗವಿಕಲ | ಮಾಜಿ ಸೈನಿಕ | ಯೋಜನಾ ನಿರಾಶ್ರಿತ |
| **1** | **2** | **3** | **4** | **5** | **6** | **7** | **8** | **9** | **10** |
| 1 | ಶೀಘ್ರಲಿಪಿಗಾರರು 14550 – 26700 (ಇತರೆ ಭತ್ಯೆಗಳು) | 10 | ಸಾಮಾನ್ಯ ಅಭ್ಯರ್ಥಿ | – | 1 | – | – | – | 1 |
| | | | ಪರಿಶಿಷ್ಟ ಜಾತಿ | – | 2 | – | 1 | – | – |
| | | | ಪರಿಶಿಷ್ಟ ಪಂಗಡ | 1 | – | – | – | – | – |
| | | | ಪ್ರವರ್ಗ-1 | – | – | 1 | – | – | – |
| | | | ಪ್ರವರ್ಗ-2ಎ | – | 1 | – | 1 | – | – |
| | | | ಪ್ರವರ್ಗ-2ಬಿ | – | – | 1 | – | – | – |
| | | | ಒಟ್ಟು | 1 | 4 | 2 | 2 | – | 1 |
| 2 | ಬೆರಳಚ್ಚುಗಾರರು 11600 – 21000 (ಇತರೆ ಭತ್ಯೆಗಳು) | 02 | ಸಾಮಾನ್ಯ ಅಭ್ಯರ್ಥಿ | – | – | – | 1 | – | – |
| | | | ಪರಿಶಿಷ್ಟ ಜಾತಿ | – | 1 | – | – | – | – |
| | | | ಒಟ್ಟು | – | 1 | – | 1 | – | – |

**2) ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ :–**

| ಕ್ರಮ ಸಂಖ್ಯೆ | ಹುದ್ದೆ | ಕನಿಷ್ಠ ಶೈಕ್ಷಣಿಕ ವಿದ್ಯಾರ್ಹತೆ |
|---|---|---|
| 01 | ಶೀಘ್ರಲಿಪಿಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಮತ್ತು<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ |
| 02 | ಬೆರಳಚ್ಚುಗಾರ | 1) ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ ಮತ್ತು<br>2) ಸಾರ್ವಜನಿಕ ಶಿಕ್ಷಣ ಇಲಾಖೆಯಿಂದ ನಡೆಸಲಾದ ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ |

**3) ವಯೋಮಿತಿ :–**

**ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಈ ಕೆಳಕಂಡ ವಯೋಮಿತಿಯನ್ನು ಹೊಂದಿರತಕ್ಕದ್ದು.**

| ಕ್ರಮ ಸಂಖ್ಯೆ | ಅಭ್ಯರ್ಥಿಯ ಪ್ರವರ್ಗ | ಕನಿಷ್ಠ ವಯೋಮಿತಿ | ಗರಿಷ್ಠ ವಯೋಮಿತಿ |
|---|---|---|---|
| 1 | ಸಾಮಾನ್ಯ ವರ್ಗ | 18 ವರ್ಷ | 35 ವರ್ಷ |
| 2 | ಪ್ರವರ್ಗ 2ಎ, 2ಬಿ, 3ಎ, 3ಬಿ | | 38 ವರ್ಷ |
| 3 | ಪರಿಶಿಷ್ಟ ಜಾತಿ : ಪರಿಶಿಷ್ಟ ಪಂಗಡ : ಪ್ರವರ್ಗ–1 | | 40 ವರ್ಷ |

ಸರಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ ಮತ್ತು ಅಂಗವಿಕಲರಿಗೆ ನಿಯಮಗಳ ಅನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವದು.

**4) ಆಯ್ಕೆ ವಿಧಾನ :–**

**1)** ಅಭ್ಯರ್ಥಿಗಳ ಆಯ್ಕೆಯನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು (ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) ನಿಯಮಗಳು 1982 ಮತ್ತು ತಿದ್ದುಪಡಿ ನಿಯಮಗಳು 2007 ರಂತೆ ಮಾಡಲಾಗುವದು. ಆಯ್ಕೆಯಾದ ಅಭ್ಯರ್ಥಿಗಳು ನೇಮಕಾತಿ ನಿಯಮಗಳಂತೆ ಎರಡು ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯನ್ನು ಪೂರೈಸಬೇಕಾಗುವದು ಮತ್ತು ನಿರ್ಧಿಷ್ಟ ಪಡಿಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಬೇಕಾಗುವದು.

**2)** ಶೀಘ್ರಲಿಪಿಗಾರ ಹುದ್ದೆಗೆ ಒಂದು ನಿಮಿಷಕ್ಕೆ 120 ಶಬ್ದಗಳಂತೆ 5 ನಿಮಿಷಗಳ ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಅದನ್ನು ಲಿಪ್ಯಂತರಗೊಳಿಸಿ, ಬೆರಳಚ್ಚು ಮಾಡಲು 45 ನಿಮಿಷಗಳ ಕಾಲಾವಕಾಶ ನೀಡಲಾಗುವದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗದಿಪಡಿಸಿದ್ದು, ಸಂದರ್ಶನಕ್ಕೆ ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಮತ್ತು ಶೀಘ್ರಲಿಪಿ ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನಡೆಸಲಾದ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಶೀಘ್ರಲಿಪಿ ಮತ್ತು ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

3) ಬೆರಳಚ್ಚುಗಾರರ ಹುದ್ದೆಗಳಿಗೆ ಬೆರಳಚ್ಚು ಮಾಡಲು ಉಕ್ತ ಲೇಖನವನ್ನು ಕನ್ನಡ ಮತ್ತು ಆಂಗ್ಲ ಭಾಷೆಯಲ್ಲಿ ನೀಡಲಾಗುವದು. ಇದಕ್ಕೆ 100 ಗರಿಷ್ಠ ಅಂಕಗಳನ್ನು ನಿಗದಿಪಡಿಸಿದ್ದು, ಅರ್ಹತೆ ಹೊಂದಲು ಕನಿಷ್ಠ 50 ಅಂಕಗಳನ್ನು ಪಡೆಯಬೇಕಾಗುವದು. ಅಭ್ಯರ್ಥಿಯು ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ, ಹಿರಿಯ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಗಳಲ್ಲಿ ಮತ್ತು ಈ ಪ್ರಾಧಿಕಾರ ನೆಡಸಲಾದ ಬೆರಳಚ್ಚು ಪರೀಕ್ಷೆಗಳಲ್ಲಿ ಪಡೆದ ಅಂಕಗಳ ಸರಾಸರಿ ಆಧಾರದ ಮೇಲೆ ಒಂದು ಹುದ್ದೆಗೆ 5 ರಂತೆ ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆಯಲಾಗುವದು. ಸಂದರ್ಶನಕ್ಕೆ ಒಟ್ಟು 5 ಗುಣಗಳನ್ನು ನಿಗದಿಪಡಿಸಲಾಗಿದೆ. ಅಭ್ಯರ್ಥಿಯು ಹುದ್ದೆಗೆ ನಿಗದಿಪಡಿಸಲಾದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಅಂಕಗಳು, ಈ ಪ್ರಾಧಿಕಾರವು ನಡೆಸಲಾದ ಕನ್ನಡ ಮತ್ತು ಆಂಗ್ಲ ಬೆರಳಚ್ಚು ಪರೀಕ್ಷೆಯಲ್ಲಿ ಪಡೆದ ಅಂಕಗಳು ಮತ್ತು ಸಂದರ್ಶನದಲ್ಲಿ ಪಡೆದ ಅಂಕಗಳ ಆಧಾರದ ಮೇಲೆ ಅಭ್ಯರ್ಥಿಗಳನ್ನು ಆಯ್ಕೆಮಾಡಲಾಗುವದು.

**4) ಸೂಚನೆಗಳು :–**

1) ಅಭ್ಯರ್ಥಿಗಳು ತಾವು ಯಾವ ಹುದ್ದೆಗೆ ಅರ್ಜಿಯನ್ನು ಸಲ್ಲಿಸಿದ್ದಾರೆ ಎನ್ನುವುದನ್ನು ಲಕೋಟೆಯ ಮೇಲೆ ಹಾಗೂ ಅರ್ಜಿಯ ಮೇಲೆ ಕಡ್ಡಾಯವಾಗಿ ನಮೂದಿಸತಕ್ಕದ್ದು.
2) ಸರಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು ಹಾಗೂ ಸೇವಾ ಪ್ರಮಾಣ ಪತ್ರವನ್ನು ಪಡೆದುಕೊಂಡು, ಅರ್ಜಿಯ ಜೊತೆಗೆ ಲಗತ್ತಿಸಿ, ಆ ಅರ್ಜಿಯನ್ನು ಸಮುಚಿತ ಮಾರ್ಗದ ಮುಖಾಂತರ ಸಲ್ಲಿಸತಕ್ಕದ್ದು.
3) ಅಭ್ಯರ್ಥಿಗಳು ನಿರ್ಧಿಷ್ಟಪಡಿಸಿದ ಅರ್ಜಿ ನಮೂನೆಯಲ್ಲಿ ತಮ್ಮ ಇತ್ತೀಚಿನ ಪಾಸ್‌ಪೋರ್ಟ್ ಸೈಜ ಭಾವಚಿತ್ರವನ್ನು ಅಂಟಿಸಿ, ಅದರ ಜೊತೆಗೆ ಸ್ವ–ವಿಳಾಸವಿರುವ ಮತ್ತು 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಲಕೋಟೆಯೊಂದಿಗೆ ಸಲ್ಲಿಸತಕ್ಕದ್ದು.
4) ಅಭ್ಯಥಿಗಳನ್ನು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯಲ್ಲಿ ಪಡೆದ ಗುಣಗಳ ಆಧಾರದ ಮೇಲೆ ಸಂದರ್ಶನಕ್ಕೆ ಕರೆಯಬೇಕಾಗಿರುವದರಿಂದ, ಅವರು ನಿಗದಿಪಡಿಸಿದ ಕನಿಷ್ಠ ವಿದ್ಯಾರ್ಹತೆಯನ್ನು ಹೊಂದಿದ ಬಗ್ಗೆ ಸ್ವಯಂ ದೃಢೀಕೃತ ಅಂಕಪಟ್ಟಿಗಳ ನಕಲುಗಳನ್ನು ಕಡ್ಡಾಯವಾಗಿ ಅರ್ಜಿಯ ಜೊತೆಗೆ ಲಗತ್ತಿಸತಕ್ಕದ್ದು. ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.
5) ಜನ್ಮ ದಿನಾಂಕವನ್ನು ದೃಢೀಕರಿಸಲು ಎಸ್‌ಎಸ್‌ಎಲ್‌ಸಿ ಅಂಕಪಟ್ಟಿ ಅಥವಾ ವರ್ಗಾವಣೆ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ದಾಖಲೆಯನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.
6) ಮಿಸಲಾತಿಯನ್ನು ಕೋರಿ ಅರ್ಜಿಗಳನ್ನು ಸಲ್ಲಿಸುವ ಅಭ್ಯರ್ಥಿಗಳು ಸರಕಾರದಿಂದ ನಿಗದಿಪಡಿಸಿದ ಸಂಬಂಧಪಟ್ಟ ಪ್ರಾಧಿಕಾರಿಗಳಿಂದ ಪಡೆದ ಹಾಗೂ ಚಾಲ್ತಿಯಲ್ಲಿರುವ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ದಾಖಲೆಗಳನ್ನು ಕಡ್ಡಾಯವಾಗಿ ಲಗತ್ತಿಸತಕ್ಕದ್ದು.

7) ಒಂದು ವೇಳೆ ಅಧಿಸೂಚನೆಯಲ್ಲಿ ನಮೂದಿಸಿದ ವರ್ಗೀಕರಣಕ್ಕನುಸಾರವಾಗಿ ಅರ್ಹ ಮಹಿಳೆ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳು ಲಭ್ಯವಾಗದಿದ್ದಲ್ಲಿ ಆ ಸ್ಥಾನಗಳಿಗೆ ಅದೇ ವರ್ಗದ ಅರ್ಹ ಇತರ ಅಭ್ಯರ್ಥಿಗಳನ್ನು ಭರ್ತಿ ಮಾಡಿಕೊಳ್ಳಲಾಗುವದು.

8) ಅರ್ಹತಾ ಪರೀಕ್ಷೆ ಮತ್ತು ಸಂದರ್ಶನಕ್ಕಾಗಿ ಆಹ್ವಾನಿಸಿದ ಅಭ್ಯರ್ಥಿಗಳು ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

9) ಅಪೂರ್ಣ ಮತ್ತು ಕಡ್ಡಾಯವಾಗಿ ಲಗತ್ತಿಸಬೇಕಾದ ದಾಖಲಾತಿಗಳನ್ನು ಲಗತ್ತಿಸಲಾರದ ಹಾಗೂ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವದಿಲ್ಲ.

10) ಅಂಗವಿಕಲ ಮೀಸಲಾತಿ ಕೋರುವ ಅಭ್ಯರ್ಥಿಗಳು ದಿನಾಂಕ: 19–05–2005 ರ ಸರಕಾರದ ಅಧಿಕೃತ ಜ್ಞಾಪನ ಸಂಖ್ಯೆ: ಸಿಆಸುಇ/115/ಸೇನೆನಿ/2005 ರಡಿಯಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪ್ರಮಾಣ ಪತ್ರವನ್ನು ಪಡೆದು, ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

11) ಗ್ರಾಮೀಣ ಮೀಸಲಾತಿ ಕೋರುವ ಅಭ್ಯರ್ಥಿಗಳು ಸರಕಾರಿ ಆದೇಶ ಸಂಖ್ಯೆ: ಸಿಆಸುಇ/98/ಸೇನೆನಿ/2005, ದಿನಾಂಕ: 10–08–2005 ರ ಪ್ರಕಾರ ನಿಗದಿತ ನಮೂನೆ 2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುರುಜು ಮಾಡಿಸಿ, ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

12) ಗ್ರಾಮೀಣ ಮೀಸಲಾತಿ ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ನಮೂನೆ 2 ರ ಮೀಸಲಾತಿ ಪ್ರಮಾಣ ಪತ್ರದ ಜೊತೆಗೆ ನಮೂನೆ 1 ರಲ್ಲಿ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ತಹಶೀಲ್ದಾರರವರಿಂದ ಪಡೆದ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ಛಾಯಾ ಪ್ರತಿಯನ್ನು ಸಲ್ಲಿಸತಕ್ಕದ್ದು.

13) ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡ, ಪ್ರವರ್ಗ–1, ಪ್ರವರ್ಗ–2ಎ, ಪ್ರವರ್ಗ–2ಬಿ, ಪ್ರವರ್ಗ–3ಎ, ಮತ್ತು ಪ್ರವರ್ಗ–3ಬಿ ಕ್ಕೆ ಸೇರಿರುವ ಅಭ್ಯರ್ಥಿಗಳು ಅರ್ಜಿ ಸಲ್ಲಿಸುವ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ಛಾಯಾ ಪ್ರತಿಗಳನ್ನು ಸಲ್ಲಿಸತಕ್ಕದ್ದು.

14) ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

15) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅರ್ಜಿದಾರರಿಗೆ ಸಂಬಂಧಿಕರಲ್ಲದ ಇಬ್ಬರು ಗಣ್ಯ ವ್ಯಕ್ತಿಗಳು ನೀಡಿರುವ ನಡತೆ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು.

16) ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿದ ದಿನಾಂಕದಿಂದ 6 ತಿಂಗಳ ಒಳಗಿರುವ ಹಾಗೂ ಅಭ್ಯರ್ಥಿಯು ಅಭ್ಯಸಿಸಿದ ಶಾಲೆ / ವಿದ್ಯಾಲಯದಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು.

**ವಿಶೇಷ ಸೂಚನೆಗಳು :–**

1) ಅರ್ಜಿಯೊಂದಿಗೆ ಲಗತ್ತಿಸಿರುವ ಎಲ್ಲಾ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದೊಳಗೆ ಪಡೆದು ಲಗತ್ತಿಸಿರಬೇಕು. ಇಲ್ಲವೇ ಕೊನೆಯ ದಿನಾಂಕದಂದು ಸಿಂಧುವಾಗಿರಬೇಕು.

2) ಯಾವುದೇ ಅಭ್ಯರ್ಥಿಯು ಸರ್ಕಾರಿ ಃ ಸರ್ಕಾರೇತರ ಅಧಿಕಾರಿಗಳಿಂದ ತನ್ನ ಅಭ್ಯರ್ಥಿಕೆಯ ಬಗ್ಗೆ ಪ್ರಭಾವ ಬೀರಿದಲ್ಲಿ, ಅಂತಹ ಅಭ್ಯರ್ಥಿಗಳು ನೇಮಕಾತಿಗೆ ಅರ್ಹರಾಗುವುದಿಲ್ಲ.

3) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ದಿನಾಂಕವು ಸಾರ್ವಜನಿಕ ರಜೆ ಎಂದು ಘೋಷಿಸಿದ ಪಕ್ಷದಲ್ಲಿ ಮುಂದಿನ ಕಚೇರಿ ಕೆಲಸದ ದಿನ ಅರ್ಜಿ ಸಲ್ಲಿಸಲು ಕಡೆಯ ದಿನಾಂಕ ಎಂದು ತಿಳಿಯತಕ್ಕದ್ದು.

4) ಯಾವುದೇ ಅಭ್ಯರ್ಥಿಯು ಸಂದರ್ಶನದ ಬಗ್ಗೆ ಮಾಹಿತಿ ಬರದಿದ್ದರೆ, ಅವರು ಸಂದರ್ಶನಕ್ಕೆ ಅರ್ಹರಲ್ಲ ಎಂದು ತಿಳಿಯತಕ್ಕದ್ದು ಮತ್ತು ಆ ಬಗ್ಗೆ ಯಾವುದೇ ಪತ್ರ ವ್ಯವಹಾರವನ್ನು ಮಾಡಲಾಗುವುದಿಲ್ಲ.

5) ನಿಗದಿಪಡಿಸಿದ ಕೊನೆಯ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

6) ಅಭ್ಯರ್ಥಿಗಳು ಈ ನೇಮಕಾತಿ ಪ್ರಾಧಿಕಾರ(ಜಿಲ್ಲಾ ನ್ಯಾಯಾಲಯ, ಬಾಗಲಕೋಟ) ನಿಗದಿಪಡಿಸಿದ ಅರ್ಜಿ ನಮೂನೆಯಲ್ಲಿಯೇ ಅರ್ಜಿಗಳನ್ನು ತಮ್ಮ ಸ್ವಂತ ಹಸ್ತಾಕ್ಷರಗಳಿಂದ ಭರ್ತಿ ಮಾಡಿ ಸಲ್ಲಿಸತಕ್ಕದ್ದು, ಇಲ್ಲವಾದಲ್ಲಿ ಅಂತಹ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

**ಸ್ಥಳ : ಬಾಗಲಕೋಟ.**
**ದಿನಾಂಕ : 18–06–2014.**

**ಎಸ್. ಸಿ. ಮರಡಿ**
ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ

**ಅರ್ಜಿ ನಮೂನೆ**

**ಬಾಗಲಕೋಟ ಜಿಲ್ಲೆಯ ನ್ಯಾಯಾಲಯದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರ / ಬೆರಳಚ್ಚುಗಾರ ಹುದ್ದೆಗೆ ಅರ್ಜಿ**

**(ಅರ್ಜಿ ಸ್ವೀಕರಿಸಲು ಕೊನೆಯ ದಿನಾಂಕ : 19–07–2014.)**

| |
|---|
| ಇತ್ತೀಚಿನ ಪಾಸ್‌ಪೋರ್ಟ ಅಳತೆಯ ಭಾವ ಚಿತ್ರವನ್ನು ಅಂಟಿಸುವದು |

ಗೆ,

**ಮಾನ್ಯ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಬಾಗಲಕೋಟ.**

**ಮಾನ್ಯರೇ,**

ತಮ್ಮ ನ್ಯಾಯಾಲಯದ ಅಧಿಸೂಚನೆ ಸಂಖ್ಯೆ : 01 / 2014 ದಿನಾಂಕ : 18–06–2014 ರ ಪ್ರಕಟಣೆ ಮೇರೆಗೆ ನಾನು ಈ ಕೆಳಕಂಡ ಮಾಹಿತಿಗಳೊಂದಿಗೆ "____________________" ಹುದ್ದೆಗೆ ಹಾಗೂ "_______________________" ಮೀಸಲಾತಿ ಅಡಿಯಲ್ಲಿ ನನ್ನ ಅರ್ಜಿಯನ್ನು ಸಲ್ಲಿಸುತ್ತಿದ್ದೇನೆ.

| | | | | |
|---|---|---|---|---|
| 1) | ಅಭ್ಯರ್ಥಿಯ ಪೂರ್ಣ ಹೆಸರು (ದಪ್ಪ ಅಕ್ಷರಗಳಲ್ಲಿ) | | | |
| 2) | ತಂದೆ ಃ ಗಂಡನ ಹೆಸರು | | | |
| 3) | ತಾಯಿಯ ಹೆಸರು | | | |
| 4) | ಸಂಪೂರ್ಣ ಅಂಚೆ ವಿಳಾಸ | | | |
| 5) | ದೂರವಾಣಿ ಃ ಮೊಬೈಲ್ ಸಂಖ್ಯೆ | | | |
| 6) | ಜನ್ಮ ದಿನಾಂಕ ಃ<br>(ಸೂಕ್ತ ಪ್ರಮಾಣ ಪತ್ರದ ಸ್ವಯಂ ದೃಢೀಕೃತ ನಕಲನ್ನು ಲಗತ್ತಿಸುವದು) | | | |
| 7) | ವಯಸ್ಸು (ಅರ್ಜಿಯನ್ನು ಸ್ವೀಕರಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕದಂದು ಅಭ್ಯರ್ಥಿಯ ವಯಸ್ಸು) | ವರ್ಷಗಳು | ತಿಂಗಳು | ದಿನಗಳು |
| 8) | ಲಿಂಗ | ಪುರುಷ | ಮಹಿಳೆ | |
| 9) | ರಾಷ್ಟ್ರೀಯತೆ | | | |
| 10) | ಧರ್ಮ ಮತ್ತು ಜಾತಿ | | | |
| 11) | ವೈವಾಹಿಕ ಸ್ಥಿತಿ | ವಿವಾಹಿತ | ಅವಿವಾಹಿತ | |
| 12) | ವಿವಾಹಿತರಾಗಿದ್ದಲ್ಲಿ ಒಂದಕ್ಕಿಂತ ಹೆಚ್ಚು ಜೀವಂತ ಗಂಡಃ ಹೆಂಡತಿ ಇದ್ದಾರೆಯೇ? | | | |
| 13) | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರಾ? | | | |
| 14) | ನೀವು ಸರಕಾರಿ ಸೇವೆಯಿಂದ ಅಥವಾ ಇನ್ನಾವುದಾದರೂ ಸೇವೆಯಿಂದ ವಜಾ ಆಗಿದ್ದೀರಾ? ಅಥವಾ ತೆಗೆದುಹಾಕಲ್ಪಟ್ಟಿದ್ದೀರಾ? | | | |
| 15) | ನೀವು ಸರಕಾರಿ ಸೇವೆಯಲ್ಲಿ ಇದ್ದಲ್ಲಿ ಅದರ ವಿವರ (ನಿರಾಪೇಕ್ಷಣಾ ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| 16) | ಶೈಕ್ಷಣಿಕ ವಿದ್ಯಾರ್ಹತೆ | ಗರಿಷ್ಠ ಅಂಕಗಳು | ಪಡೆದ ಅಂಕಗಳು | ಶೇಕಡಾವಾರು |
| | 1) ಎಸ್‌ಎಸ್‌ಎಲ್‌ಸಿ | | | |
| | 2) ಹಿರಿಯ ಕನ್ನಡ ಶೀಘ್ರಲಿಪಿ | | | |
| | 3) ಹಿರಿಯ ಆಂಗ್ಲ ಶೀಘ್ರಲಿಪಿ | | | |
| | 4) ಹಿರಿಯ ಕನ್ನಡ ಬೆರಳಚ್ಚು | | | |
| | 5) ಹಿರಿಯ ಆಂಗ್ಲ ಬೆರಳಚ್ಚು | | | |
| | (ಸೂಕ್ತ ಪ್ರಮಾಣ ಪತ್ರಗಳ ಸ್ವಯಂ ದೃಢೀಕೃತ ನಕಲುಗಳನ್ನು ಲಗತ್ತಿಸುವದು) | | | |
| 17) | ಹೆಚ್ಚಿನ ವಿದ್ಯಾರ್ಹತೆಗಳು (ಪ್ರಮಾಣ ಪತ್ರವನ್ನು ಲಗತ್ತಿಸುವದು) | | | |
| 18) | ಯಾವ ಮಿಸಲಾತಿ ಅಡಿಯಲ್ಲಿ ಅರ್ಜಿಯನ್ನು ಸಲ್ಲಿಸಿರುತ್ತೀರಿ? | | | |
| 19) | ಹೆಚ್ಚಿನ ಸೇವಾ ಅನುಭವ ಇದ್ದಲ್ಲಿ ಅದರ ವಿವರ (ಪ್ರಮಾಣ ಪತ್ರ ಲಗತ್ತಿಸುವದು) | | | |
| 20) | ಲಗತ್ತಿಸಿದ ದಾಖಲೆಗಳು | 1)<br>2)<br>3)<br>4)<br>5)<br>6)<br>7)<br>8)<br>9)<br>10) | | |

ಈ ಮೇಲ್ಕಂಡ ಮಾಹಿತಿಗಳು ನನಗೆ ತಿಳಿದ ಮಟ್ಟಿಗೆ ಸತ್ಯ ಮತ್ತು ಸರಿಯಾಗಿವೆಯೆಂದು ಪ್ರಮಾಣೀಕರಿಸುತ್ತೇನೆ. ಒಂದು ವೇಳೆ ಮೇಲ್ಕಂಡ ಮಾಹಿತಿಗಳು ತಪ್ಪು ಎಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ರದ್ದುಪಡಿಸಬಹುದು ಮತ್ತು ಕಾನೂನಿನ ಅನುಸಾರ ನನ್ನ ಮೇಲೆ ಸೂಕ್ತ ಕ್ರಮವನ್ನು ಕೈಕೊಳ್ಳಬಹುದಾಗಿದೆ ಎಂದು ಈ ಮೂಲಕ ಘೋಷಿಸುತ್ತೇನೆ.

**ಸ್ಥಳ ಃ**

**ದಿನಾಂಕ ಃ** **ಅಭ್ಯರ್ಥಿಯ ಸಹಿ**

**ಸೂಚನೆ ಃ** ಅಭ್ಯರ್ಥಿಗಳು ಅರ್ಜಿಯ ಜೊತೆಗೆ 5 ರೂಪಾಯಿಗಳ ಅಂಚೆ ಚೀಟಿಯನ್ನು ಲಗತ್ತಿಸಿದ ಸ್ವವಿಳಾಸವಿರುವ ಲಕೋಟೆಯನ್ನು ಸಲ್ಲಿಸತಕ್ಕದ್ದು.

**PR.62**
**SC.5**

## ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರವರ ಕಛೇರಿ, ಚಾಮರಾಜನಗರ

**ಅಧಿಸೂಚನೆ ಸಂಖ್ಯೆ. ಎಡಿಎಮ್ಎನ್ / 1764/2014, ದಿನಾಂಕಃ 24.06.2014**

**ವಿಷಯಃ** ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ, ಬೆರಳಚ್ಚುಗಾರರ, ನಕಲು ಬೆರಳಚ್ಚುಗಾರರ, ಆದೇಶ ಜಾರೀಕಾರರ ಮತ್ತು ಸೇವಕರ ಹುದ್ದೆಗಳನ್ನು ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಬಗ್ಗೆ.

**ಉಲ್ಲೇಖಃ** ಗೌರವಾನ್ವಿತ ಕರ್ನಾಟಕ ಉಚ್ಚ ನ್ಯಾಯಾಲಯದ ಅನುಮತಿ ಪತ್ರ ಸಂಖ್ಯೆ:

1. LCA-II. 128/2012 ದಿನಾಂಕ 24.09.2013.
2. LCA-II.128/2012 ದಿನಾಂಕ 07.06.2014.
3. ದಿನಾಂಕ 24.06.2014 ರ ಈ ಕಛೇರಿ ಟಿಪ್ಪಣಿ ಮೇಲಿನ ಆದೇಶ.

ಚಾಮರಾಜನಗರದ ಜಿಲ್ಲಾ ನ್ಯಾಯಾಂಗ ಘಟಕದ ಅಧೀನ ನ್ಯಾಯಾಲಯಗಳಲ್ಲಿ ಖಾಲಿ ಇರುವ ಶೀಘ್ರಲಿಪಿಗಾರರ 7 ಹುದ್ದೆಗಳು, ಬೆರಳಚ್ಚುಗಾರರ 2 ಹುದ್ದೆಗಳು, ನಕಲು ಬೆರಳಚ್ಚುಗಾರರ 2 ಹುದ್ದೆಗಳು, ಆದೇಶ ಜಾರೀಕಾರರ 2 ಹುದ್ದೆಗಳು ಮತ್ತು ಸೇವಕರ 14 ಹುದ್ದೆಗಳಿಗೆ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ. ನಿಗದಿಪಡಿಸಿದ ಅರ್ಜಿ ನಮೂನೆಯ ಬೆರಳಚ್ಚು ಪ್ರತಿ / ಗಣಕೀಕೃತ ಪ್ರತಿಯಲ್ಲಿಯೇ ಅಭ್ಯರ್ಥಿಗಳು ತಮ್ಮ ಸ್ವಂತ ಕೈಬರಹದಿಂದ ಎಲ್ಲಾ ಅಂಕಣಗಳನ್ನು ಜಾಗರೂಕತೆಯಿಂದ ಭರ್ತಿ ಮಾಡಿ, ಸಂಬಂಧ ಪಟ್ಟ ದಾಖಲೆಗಳ ಸ್ವಯಂ ದೃಢೀಕೃತ ನಕಲು ಪ್ರತಿಗಳೊಡನೆ ದಿನಾಂಕಃ 19.07.2014ರಂದು ಸಂಜೆ 5 ಘಂಟೆಯೊಳಗೆ ಈ ಕಛೇರಿಗೆ ಸಲ್ಲಿಸತಕ್ಕದ್ದು.

**ಅರ್ಜಿ ಸಲ್ಲಿಸಬೇಕಾದ ವಿಳಾಸ :**_ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಚಾಮರಾಜನಗರ.

**I. ಹುದ್ದೆಯ ಪದನಾಮ : ಶೀಘ್ರಲಿಪಿಗಾರರು**

ಖಾಲಿ ಹುದ್ದೆಗಳ ಸಂಖ್ಯೆ : 07 (5 ಹಿಂಬಾಕಿ ಹುದ್ದೆಗಳು)

ವೇತನ ಶ್ರೇಣಿ : 14550–350–15600–400–17200–450–19000–500–21000–600–24600–700–26700/–.

| ವರ್ಗೀಕರಣ | ಇತರೆ | ಮಹಿಳೆ | ಗ್ರಾಮೀಣ | ಅಂಗವಿಕಲ | ಒಟ್ಟು |
|---|---|---|---|---|---|
| ಪರಿಶಿಷ್ಟ ಜಾತಿ | – | – | 1 ( ಹಿಂಬಾಕಿ ಹುದ್ದೆ ) | – | 1 |
| ಪರಿಶಿಷ್ಟ ಪಂಗಡ | 1 ( ಹಿಂಬಾಕಿ ಹುದ್ದೆ ) | – | – | – | 1 |
| ಪ್ರವರ್ಗ – II (ಎ) | – | 1 (ಹಿಂಬಾಕಿ ಹುದ್ದೆ) | – | – | 1 |
| ಪ್ರವರ್ಗ – II (ಬಿ) | 1 ( ಹಿಂಬಾಕಿ ಹುದ್ದೆ ) | – | – | – | 1 |
| ಪ್ರವರ್ಗ – III (ಎ) | 1 | – | – | – | 1 |
| ಸಾಮಾನ್ಯ ವರ್ಗ | – | 1 | – | 1 * (ಹಿಂಬಾಕಿ ಹುದ್ದೆ ) | 2 |
| **ಒಟ್ಟು** | **3** | **2** | **1** | **1** | **7** |

* ದೃಷ್ಟಿಮಾಂದ್ಯ ಅಂಗವಿಕಲ ಅಭ್ಯರ್ಥಿ ( ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 128 ಸೆನೆನಿ 2006 ಬೆಂಗಳೂರು ದಿನಾಂಕ 01.08.2009 ರಲ್ಲಿ ನಿಗದಿಪಡಿಸಿರುವಂತೆ).

ಶೈಕ್ಷಣಿಕ ವಿದ್ಯಾರ್ಹತೆಃ

1. ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade|) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.
3. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ (senior grade|) ಕನ್ನಡ ಮತ್ತು ಆಂಗ್ಲ ಭಾಷೆಗಳ ಶೀಘ್ರಲಿಪಿ ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**II. ಹುದ್ದೆಯ ಪದನಾಮ : ಬೆರಳಚ್ಚುಗಾರರು**

ಖಾಲಿ ಹುದ್ದೆಗಳ ಸಂಖ್ಯೆ : 02 ( 1 ಬ್ಯಾಕ್‌ಲಾಗ್ ಹುದ್ದೆಯಾಗಿರುತ್ತದೆ)

ವೇತನ ಶ್ರೇಣಿಃ 11600–200–12000–250–13000–300–14200–350–15600–400–17200–450–19000–500–21000/–

| ವರ್ಗೀಕರಣ | ಅಂಗವಿಕಲ |
|---|---|
| ಪರಿಶಿಷ್ಟ ಜಾತಿ | 1 (ಹಿಂಬಾಕಿ ಹುದ್ದೆ) |
| ಪ್ರವರ್ಗ II-A | 1 |
| **ಒಟ್ಟು** | **2** |

ದೃಷ್ಟಿಮಾಂದ್ಯ ಅಂಗವಿಕಲ ಅಭ್ಯರ್ಥಿಗಳಿಗೆ ಮೀಸಲಾಗಿರುತ್ತದೆ. ಕರ್ನಾಟಕ ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 128 ಸೇನೆನಿ 2006 ಬೆಂಗಳೂರು ದಿನಾಂಕ 01.08.2009 ರಲ್ಲಿ ನಿಗದಿಪಡಿಸಿರುವಂತೆ).

**ಶೈಕ್ಷಣಿಕ ವಿದ್ಯಾರ್ಹತೆ:**

1. ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಹಿರಿಯ ದರ್ಜೆ ( Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

**III. ಹುದ್ದೆಯ ಪದನಾಮ : ನಕಲು ಬೆರಳಚ್ಚುಗಾರರು**

ಖಾಲಿ ಹುದ್ದೆಗಳ ಸಂಖ್ಯೆ : 02

ವೇತನ ಶ್ರೇಣಿ : 11600–200–12000–250–13000–300–14200– 350–15600–400–17200–450–19000–500–21000 /–

| ವರ್ಗೀಕರಣ | ಇತರೆ | ಮಾಜಿ ಸೈನಿಕ | ಒಟ್ಟು |
|---|---|---|---|
| ಪ್ರವರ್ಗ IIIB | 1 | – | 1 |
| ಸಾಮಾನ್ಯ ವರ್ಗ | – | 1 | 1 |
| **ಒಟ್ಟು** | **1** | **1** | **2** |

**ಶೈಕ್ಷಣಿಕ ವಿದ್ಯಾರ್ಹತೆ:**

1. ಎಸ್‌ಎಸ್‌ಎಲ್‌ಸಿ ಅಥವಾ ತತ್ಸಮಾನ ಪರೀಕ್ಷೆಯಲ್ಲಿ ಉತ್ತೀರ್ಣರಾಗಿರತಕ್ಕದ್ದು.
2. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ವತಿಯಿಂದ ನಡೆಸುವ ಕಿರಿಯ ದರ್ಜೆ ( Senior Grade) ಕನ್ನಡ ಮತ್ತು ಆಂಗ್ಲ ಭಾಷೆಗಳ ಬೆರಳಚ್ಚು ವಿಷಯಗಳಲ್ಲಿ ತೇರ್ಗಡೆ ಹೊಂದಿರಬೇಕು ಅಥವಾ ತತ್ಸಮಾನ ವಿದ್ಯಾರ್ಹತೆ.

IV. ಹುದ್ದೆಯ ಪದ ನಾಮ : " ಆದೇಶ ಜಾರೀಕಾರ "

ಖಾಲಿ ಹುದ್ದೆಗಳ ಸಂಖ್ಯೆ : 02

ವೇತನ ಶ್ರೇಣಿ : 11000–200–12000–250–13000–300–14200–350–15600–400–17200–450–19000/–.

| **ವರ್ಗೀಕರಣ** | **ಇತರೆ** | **ಗ್ರಾಮೀಣ** | **ಒಟ್ಟು** |
|---|---|---|---|
| ಪ್ರವರ್ಗ–IIIA | 1 | – | 1 |
| ಸಾಮಾನ್ಯ ವರ್ಗ | – | 1 | 1 |
| **ಒಟ್ಟು** | **1** | **1** | **2** |

**ಶೈಕ್ಷಣಿಕ ವಿದ್ಯಾರ್ಹತೆ:**

1. ಕರ್ನಾಟಕ ಪ್ರೌಢಶಿಕ್ಷಣ ಪರೀಕ್ಷಾ ಮಂಡಳಿ ನಡೆಸುವ ಎಸ್‌ಎಸ್‌ಎಲ್‌ಸಿ ಪರೀಕ್ಷೆಯಲ್ಲಿ ಉತ್ತೀರ್ಣತೆ ಅಥವಾ ತತ್ಸಮಾನ ವಿದ್ಯಾರ್ಹತೆ.
2. ಡ್ರೈವಿಂಗ್ ಲೈಸೆನ್ಸ್‌ನ್ನು ಹೊಂದಿದ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.

**V. ಹುದ್ದೆಯ ಪದ ನಾಮ : ಸೇವಕರು**

ಖಾಲಿ ಹುದ್ದೆಗಳ ಸಂಖ್ಯೆ : 14

ವೇತನ ಶ್ರೇಣಿ : 9600–200–12000–250–13000–300–14200–350–14550/–.

| **ವರ್ಗೀಕರಣ** | **ಇತರೆ** | **ಮಹಿಳೆ** | **ಗ್ರಾಮೀಣ** | **ಮಾಜಿ ಸೈನಿಕ** | **ಕನ್ನಡ ಮಾಧ್ಯಮ** | **ಯೋಜನಾ ನಿರಾಶ್ರಿತ** | **ಒಟ್ಟು** |
|---|---|---|---|---|---|---|---|
| ಪರಿಶಿಷ್ಟ ಜಾತಿ | 1 | – | 1 | – | – | – | 2 |
| ಪರಿಶಿಷ್ಟ ಪಂಗಡ | – | 1 | – | – | – | – | 1 |
| ಪ್ರವರ್ಗ – I | – | 1 | – | – | – | – | 1 |
| ಪ್ರವರ್ಗ – II (ಎ) | – | 1 | 1 | – | – | – | 2 |
| ಪ್ರವರ್ಗ – II (ಬಿ) | – | 1 | – | – | – | – | 1 |
| ಸಾಮಾನ್ಯ ವರ್ಗ | 1 | 2 | 1 | 1 | 1 | 1 | 7 |
| **ಒಟ್ಟು** | **2** | **6** | **3** | **1** | **1** | **1** | **14** |

**ಶೈಕ್ಷಣಿಕ ವಿದ್ಯಾರ್ಹತೆಃ**

1) 7ನೇ ತರಗತಿ ಪರೀಕ್ಷೆಯಲ್ಲಿ ಉತ್ತೀರ್ಣತೆ.

2) ಕನ್ನಡ ಓದಲು ಮತ್ತು ಬರೆಯಲು ತಿಳಿದಿರಬೇಕು.

ಮೇಲ್ಕಂಡ ಎಲ್ಲಾ ಹುದ್ದೆಗಳನ್ನು ಕರ್ನಾಟಕ ಅಧೀನ ನ್ಯಾಯಾಲಯಗಳು ( ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ)ನಿಯಮಗಳು 1982 ಮತ್ತು ಕರ್ನಾಟಕ ಅಧೀನ ನ್ಯಾಯಾಲಯಗಳು ( ಲಿಪಿಕ ಮತ್ತು ಇತರೆ ಹುದ್ದೆಗಳು) (ನೇಮಕಾತಿ) (ತಿದ್ದುಪಡಿ) ನಿಯಮಗಳು 2007ರ ಅನ್ವಯ ನೇರನೇಮಕಾತಿಯ ಮೂಲಕ ಆಯ್ಕೆ ಮಾಡಲಾಗುವುದು.

**ಪರಿವೀಕ್ಷಣಾ ಅವಧಿ ಃ** ಆಯ್ಕೆಯಾದ ಅಭ್ಯರ್ಥಿಗಳನ್ನು ನೇಮಕಾತಿ ನಿಯಮಗಳಂತೆ 2 ವರ್ಷಗಳ ಕಾಲ ಪರಿವೀಕ್ಷಣಾ ಅವಧಿಯಲ್ಲಿಡಲಾಗುವುದು. ಈ ಅವಧಿಯಲ್ಲಿ ಅಭ್ಯರ್ಥಿಗಳು ಅವರುಗಳ ಹುದ್ದೆಗೆ ನಿಗದಿಪಡಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ಮತ್ತು ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗಬೇಕು.

**ವಯೋಮಿತಿ ಃ**

1) ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅಭ್ಯರ್ಥಿಯು ಕನಿಷ್ಠ 18 ವರ್ಷ ವಯಸ್ಸನ್ನು ಪೂರೈಸಿರತಕ್ಕದ್ದು ಮತ್ತು ಗರಿಷ್ಠ ವಯಸ್ಸನ್ನು ಮೀರಿರಕೂಡದು.

i) **ಗರಿಷ್ಠ ವಯೋಮಿತಿ ಃ**

| | |
|---|---|
| ಸಾಮಾನ್ಯ ವರ್ಗ | 35 ವರ್ಷ ಮೀರಿರಬಾರದು |
| ಪ್ರವರ್ಗ 2ಎ, 2ಬಿ, 3ಎ, 3ಬಿ | 38 ವರ್ಷ ಮೀರಿರಬಾರದು |
| ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ / ಪ್ರವರ್ಗ – 1 | 40 ವರ್ಷ ಮೀರಿರಬಾರದು |

ii) ಸರ್ಕಾರಿ ಸೇವೆಯಲ್ಲಿರುವವರಿಗೆ, ವಿಧವೆಯರಿಗೆ, ಮಾಜಿ ಸೈನಿಕರಿಗೆ, ಜೀತ ಕಾರ್ಮಿಕರಿಗೆ ಹಾಗೂ ಅಂಗವಿಕಲರಿಗೆ ನಿಯಮಾನುಸಾರ ವಯೋಮಿತಿಯಲ್ಲಿ ಸಡಿಲಿಕೆ ನೀಡಲಾಗುವುದು (ಈ ಬಗ್ಗೆ ಮೀಸಲಾತಿ ಕೋರಿದಲ್ಲಿ ನಿಗದಿ ಪಡಿಸಿದ ಪ್ರಮಾಣಪತ್ರ ಸಲ್ಲಿಸಬೇಕು).

2. ಜನ್ಮ ದಿನಾಂಕವನ್ನು ನಮೂದಿಸಿರುವ 7 ನೇ ತರಗತಿ ಅಂಕಪಟ್ಟಿ / ಎಸ್.ಎಸ್.ಎಲ್.ಸಿ. ಅಥವಾ ತತ್ಸಮಾನ ಪರೀಕ್ಷೆಯ ಪ್ರಮಾಣ ಪತ್ರ / ವರ್ಗಾವಣೆ ಪ್ರಮಾಣ ಪತ್ರ / ಜನನ ದಿನಾಂಕವನ್ನು ತೋರಿಸುವ ಸಂಚಿತ ದಾಖಲೆಯ ಉದ್ಧೃತ ಭಾಗದ ಪ್ರತಿ ಸಲ್ಲಿಸಬೇಕು.

3. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು, ನಮೂನೆ–ಡಿ ಯಲ್ಲಿ, ಪ್ರವರ್ಗ –1ರ ಅರ್ಭರ್ಥಿಗಳು ನಮೂನೆ–ಇ ಯಲ್ಲಿ ಮತ್ತು ಪ್ರವರ್ಗ–2ಎ, 2ಬಿ, 3ಎ, 3ಬಿ, ಗೆ ಸೇರಿದ ಅಭ್ಯರ್ಥಿಗಳು ನಮೂನೆ–ಎಫ್ ನಲ್ಲಿ ಸಂಬಂಧಿಸಿದ ತಹಸೀಲ್ದಾರವರಿಂದ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳನ್ನು ಪಡೆದು ಸಲ್ಲಿಸಬೇಕು. (ಮೀಸಲಾತಿ ಕೋರಿದ್ದಲ್ಲಿ)

4. ಕನ್ನಡ ಮಾಧ್ಯಮ ಮೀಸಲಾತಿ ಕೋರುವ ಅಭ್ಯರ್ಥಿಗಳು ನಿಗದಿಪಡಿಸಿದ ಶೈಕ್ಷಣಿಕ ವಿದ್ಯಾರ್ಹತೆಗನುಗುಣವಾಗಿ, ಸಂಬಂಧಿತ ಶಾಲಾ ಮುಖ್ಯೋಪಾಧ್ಯಾಯರಿಂದ ಪ್ರಮಾಣ ಪತ್ರ ಪಡೆದು, ಕ್ಷೇತ್ರ ಶಿಕ್ಷಣಾಧಿಕಾರಿಗಳವರಿಂದ ಮೇಲುರುಜು ಮಾಡಿಸಿ ಅರ್ಜಿಯೊಡನೆ ಲಗತ್ತಿಸುವುದು.

5. ಗ್ರಾಮೀಣ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆಃ ಸಿಆಸುಇ 96/ ಸೇನನಿ /2005 ದಿನಾಂಕ 10.08.2005ರ ಪ್ರಕಾರ ನಿಗದಿತ ನಮೂನೆ –2 ರಲ್ಲಿ ಅಧಿಕೃತ ಅಧಿಕಾರಿಗಳಿಂದ ಪಡೆದು ಅದನ್ನು ಸಂಬಂಧಿಸಿದ ಕ್ಷೇತ್ರ ಶಿಕ್ಷಣಾಧಿಕಾರಿಗಳಿಂದ ಮೇಲುಸಹಿ ಮಾಡಿಸಿ ಸಲ್ಲಿಸಬೇಕು. ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಹಾಗೂ ಹಿಂದುಳಿದ ವರ್ಗಗಳಿಗೆ ಸೇರಿದ ಅಭ್ಯರ್ಥಿಗಳ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅವರು ಗ್ರಾಮೀಣ ಮೀಸಲಾತಿಗೂ ಅನರ್ಹಗೊಂಡಿರುತ್ತಾರೆ.

6. ಗ್ರಾಮೀಣ ಮೀಸಲಾತಿಯನ್ನು ಕೋರುವ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪ್ರಮಾಣ ಪತ್ರ ನಮೂನೆ–2ರ ಜೊತೆ ನಮೂನೆ –1ರಲ್ಲೂ ಸಹ ದೃಢೀಕೃತ ಪತ್ರವನ್ನು ಸಲ್ಲಿಸುವುದು.

7. ಮಾಜಿ ಸೈನಿಕರು ಮೀಸಲಾತಿ ಕೋರಿದಲ್ಲಿ ಸೈನಿಕ ಸೇವೆಯಿಂದ ಬಿಡುಗಡೆಯಾದ/ವಿಮುಕ್ತಿ ಹೊಂದಿದ ಬಗ್ಗೆ ಪ್ರಮಾಣ ಪತ್ರ ಸಲ್ಲಿಸುವುದು.

8. ಯೋಜನಾ ನಿರಾಶ್ರಿತ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು, ಸರ್ಕಾರದ ಆದೇಶದಂತೆ ನಿಗದಿತ ನಮೂನೆಯಲ್ಲಿ ಸಂಬಂಧಿಸಿದ ತಹಸೀಲ್ದಾರರಿಂದ ಪ್ರಮಾಣ ಪತ್ರವನ್ನು ಪಡೆದು ಸಲ್ಲಿಸತಕ್ಕದ್ದು.

9. i) ಅಂತಿಮವಾಗಿ ವ್ಯಾಸಂಗ ಮಾಡಿದ ಶಾಲಾ /ಕಾಲೇಜಿನ ಮುಖ್ಯೋಪಾಧ್ಯಾಯರು/ ಪ್ರಾಂಶುಪಾಲರಿಂದ ಪಡೆದ ಒಂದು ನಡತೆ ಪ್ರಮಾಣ ಪತ್ರದ ಪ್ರತಿಯನ್ನು ಸಲ್ಲಿಸಬೇಕು.

ii) ತಮ್ಮ ಸಂಬಂಧೀಕರಲ್ಲದ ಇಬ್ಬರು ಸ್ಥಳೀಯ ಗಣ್ಯ ವ್ಯಕ್ತಿಗಳಿಂದ ಪಡೆದ 6ತಿಂಗಳ ಇತ್ತೀಚಿನ ಎರಡು ನಡತೆ ಪ್ರಮಾಣ ಪತ್ರಗಳ ಪ್ರತಿ ಸಲ್ಲಿಸಬೇಕು. (ಗಣ್ಯ ವ್ಯಕ್ತಿಗಳ ರುಜುವಿನಡಿಯಲ್ಲಿ ದಿನಾಂಕದೊಡನೆ ಹೆಸರು ಮತ್ತು ಮೊಹರು ಕಡ್ಡಾಯಾಗಿ ಇರತಕ್ಕದ್ದು.)

10. ಅಂಗವಿಕಲ ಮೀಸಲಾತಿಯನ್ನು ಕೋರುವ ಅಭ್ಯರ್ಥಿಗಳು ವೈದ್ಯಕೀಯ ಪ್ರಮಾಣ ಪತ್ರವನ್ನು ದಿನಾಂಕ 19.11.2005ರ ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆಃ ಸಿಆಸುಇ / 115/ ಸೇನೆನಿ / 2005ರಲ್ಲಿ ನಿಗದಿಪಡಿಸಿದ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಜಿಲ್ಲಾ ಮಟ್ಟದ ವೈದ್ಯಕೀಯ ಮಂಡಳಿಯಿಂದ ಪಡೆದ ಪ್ರಮಾಣ ಪತ್ರದ ಪ್ರತಿಯನ್ನು ಸಲ್ಲಿಸಬೇಕು.

**ಅಭ್ಯರ್ಥಿಗಳಿಗೆ ಸೂಚನೆ ಃ**

1. ಈ ಕಛೇರಿ ಅಧಿಸೂಚನೆ ಸಂಖ್ಯೆಃ ಎಡಿಎಮ್ಎನ್/93/2014 ದಿನಾಂಕ 07.01.2014 ಮತ್ತು ತಿದ್ದುಪಡಿ ಸಂಖ್ಯೆಃ ಎಡಿಎಮ್ಎನ್ /360/2014 ದಿನಾಂಕ 31.01.2014ಯನ್ನು ರದ್ದುಪಡಿಸಲಾಗಿರುತ್ತದೆ. ಈ ಅಧಿಸೂಚನೆ ಮೇರೆಗೆ ಈಗಾಗಲೇ ಅರ್ಜಿ ಸಲ್ಲಿಸಿರುವ ಅಭ್ಯರ್ಥಿಗಳೂ ಸಹ ಪುನಃ ಅರ್ಜಿಗಳನ್ನು ಸಲ್ಲಿಸಬೇಕಾಗಿರುತ್ತದೆ. ಸದರಿ ಅಧಿಸೂಚನೆಗೆ ಹಿಂದೆ ಸಲ್ಲಿಸಿರುವ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.

2. ಅಭ್ಯರ್ಥಿಯು ಈ ಅಧಿಸೂಚನೆಯಲ್ಲಿ ಲಗತ್ತಿಸಿದ ನಿಗದಿತ ಅರ್ಜಿ ನಮೂನೆಯಲ್ಲಿ ಬೆರಳಚ್ಚು ಮಾಡಿಸಿದ ಅಥವಾ ಗಣಕೀಕೃತ ಅರ್ಜಿಯನ್ನು ತನ್ನ ಕೈ ಬರವಣಿಗೆಯಲ್ಲಿ ಭರ್ತಿ ಮಾಡಿ ಸಲ್ಲಿಸತಕ್ಕದ್ದು. ಸರಿಯಾಗಿ ಅಂಕಣಗಳನ್ನು ಭರ್ತಿಮಾಡದೇ ಇರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಒಂದಕ್ಕಿಂತ ಹೆಚ್ಚು ಹುದ್ದೆಗಳಿಗೆ ಅರ್ಜಿ ಹಾಕಲು ಬಯಸುವವರು ಆಯಾ ಹುದ್ದೆಗಳಿಗೆ ಪ್ರತ್ಯೇಕವಾಗಿ ನಿಗದಿತ ಅರ್ಜಿ ನಮೂನೆಗಳಲ್ಲಿ ಅರ್ಜಿ ಸಲ್ಲಿಸತಕ್ಕದ್ದು. ವಿವಿಧ ಮೀಸಲಾತಿಗಳಡಿಯಲ್ಲಿ ಅರ್ಜಿ ಸಲ್ಲಿಸುವವರು ಪ್ರತ್ಯೇಕವಾಗಿ ಅರ್ಜಿಗಳನ್ನು ಮೀಸಲಾತಿ ನಮೂದಿಸಿ ಸಲ್ಲಿಸುವುದು.
4. ಅಭ್ಯರ್ಥಿಯು ಇತ್ತೀಚಿನ ಪಾಸ್‌ಪೋರ್ಟ್ ಸೈಜ್ ಫೋಟೋವನ್ನು ಅರ್ಜಿ ನಮೂನೆಯಲ್ಲಿ ತೋರಿಸಿರುವ ಜಾಗದಲ್ಲಿ ಅಂಟಿಸಿ ಅದರ ಮೇಲೆ ಸಹಿ ಮಾಡತಕ್ಕದ್ದು.
5. ಅರ್ಜಿ ನಮೂನೆಯೊಂದಿಗೆ ಸಲ್ಲಿಸಬೇಕಾಗಿರುವ ಶೈಕ್ಷಣಿಕ ವಿದ್ಯಾರ್ಹತೆಯ ಅಂಕಪಟ್ಟಿಗಳನ್ನು ಹಾಗೂ ಇತರೆ ಪ್ರಮಾಣ ಪತ್ರಗಳನ್ನು ಸ್ವಯಂ ದೃಢೀಕರಿಸತಕ್ಕದ್ದು. ಅರ್ಜಿಯೊಂದಿಗೆ ಮೂಲ ಪ್ರತಿಗಳನ್ನು ಲಗತ್ತಿಸುವ ಅವಶ್ಯಕತೆ ಇರುವುದಿಲ್ಲ. ಲಗತ್ತಿಸಿದ ಪ್ರಮಾಣ ಪತ್ರಗಳು ಅರ್ಜಿ ಸಲ್ಲಿಸುವ ದಿನಾಂಕದ ಒಳಗೆ ಪಡೆದಿರಬೇಕು. ಸ್ವಯಂ ದೃಢೀಕರಣವಿಲ್ಲದೆ ಸಲ್ಲಿಸಿರುವ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
6. ಅಪೂರ್ಣ ಅರ್ಜಿಗಳನ್ನು ಯಾವ ಪತ್ರ ವ್ಯವಹಾರಕ್ಕೂ ಅವಕಾಶ ನೀಡದೆ ತಿರಸ್ಕರಿಸಲಾಗುವುದು.
7. ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕವು ಸಾರ್ವತ್ರಿಕ ರಜಾ ದಿನವಾಗಿ ಘೋಷಿಸಲ್ಪಟ್ಟರೆ ಆ ದಿನಾಂಕದ ಮಾರನೆಯ ಕೆಲಸದ ದಿನವು ಅರ್ಜಿಗಳನ್ನು ಸ್ವೀಕರಿಸಲು ಕೊನೆಯ ದಿನಾಂಕವಾಗುವುದು.

**ವಿಶೇಷ ಸೂಚನೆ:** ಅಭ್ಯರ್ಥಿಗಳು ಒಂದಕ್ಕಿಂತ ಹೆಚ್ಚಿನ ಹುದ್ದೆ ಮತ್ತು ಮೀಸಲಾತಿಯನ್ನು ಕೋರಿದ್ದಲ್ಲಿ, ಪ್ರತ್ಯೇಕ ಹುದ್ದೆಗೆ ಮತ್ತು ಮೀಸಲಾತಿಗಾಗಿ ಪ್ರತ್ಯೇಕ ಅರ್ಜಿಗಳನ್ನು ಸಲ್ಲಿಸತಕ್ಕದ್ದು. ಪ್ರತಿಯೊಂದು ಹುದ್ದೆಗೆ ಪ್ರತ್ಯೇಕವಾಗಿ, ಹಾಗೂ ಪ್ರತಿಯೊಂದು ಮೀಸಲಾತಿಗೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸುವುದು. ಒಂದೇ ಅರ್ಜಿಯಲ್ಲಿ ಒಂದಕ್ಕಿಂತ ಹೆಚ್ಚಿನ ಹುದ್ದೆ ಅಥವಾ ಮೀಸಲಾತಿಯನ್ನು ಕೋರಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಕಾರಣವಿಲ್ಲದೇ ತಿರಸ್ಕರಿಸಲಾಗುವುದು.

**ಇತರೆ ಸೂಚನೆಗಳು :**

1. ಅಭ್ಯರ್ಥಿಗಳು ನೇಮಕಾತಿ ಸಂಬಂಧದಲ್ಲಿ ಯಾವುದೇ ಅಕ್ರಮ ಮತ್ತು ಅನುಚಿತ ಮಾರ್ಗವನ್ನು ಅನುಸರಿಸುವುದು ಕಂಡು ಬಂದಲ್ಲಿ ಅಂತಹವರನ್ನು ನೇಮಕಾತಿಗೆ ಪರಿಗಣಿಸಲಾಗುವುದಿಲ್ಲ.
2. ಅಪೂರ್ಣವಾಗಿರುವ, ಸಹಿ ಮಾಡದ ಮತ್ತು ವಿದ್ಯಾರ್ಹತೆ, ಮೀಸಲಾತಿ ಹಾಗೂ ವಯೋಮಿತಿ ರಿಯಾಯಿತಿ ಬಗ್ಗೆ ಸಂಬಂಧಪಟ್ಟ ದಾಖಲೆಗಳನ್ನು ಹೊಂದಿರದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
3. ಸರ್ಕಾರಿ ಮತ್ತು ಅರೆ ಸರ್ಕಾರಿ ಸೇವೆಯಲ್ಲಿರುವ ಅಭ್ಯರ್ಥಿಗಳು ತಮ್ಮ ನೇಮಕಾತಿ ಪ್ರಾಧಿಕಾರದಿಂದ ನಿರಾಕ್ಷೇಪಣಾ ಪ್ರಮಾಣ ಪತ್ರಗಳನ್ನು ಪಡೆದು ಅರ್ಜಿ ಜೊತೆ ಲಗತ್ತಿಸಿ ಸಲ್ಲಿಸಬೇಕು.
4. ಅರ್ಜಿದಾರರು ಯಾವ ಹುದ್ದೆಗಳಿಗೆ ಅರ್ಜಿಗಳನ್ನು ಸಲ್ಲಿಸುತ್ತಿದ್ದಾರೆಂಬುದನ್ನು ದಪ್ಪ ಅಕ್ಷರಗಳಲ್ಲಿ ಲಕೋಟೆಯ ಮೇಲೆ ಹುದ್ದೆಯ ಹೆಸರನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
5. ಅಭ್ಯರ್ಥಿಗಳು ತಮ್ಮ ಅರ್ಜಿಯೊಂದಿಗೆ 5–00 ರೂಪಾಯಿ ಅಂಚೆ ಮುದ್ರಾಂಕ (ಪೋಸ್ಟಲ್ ಸ್ಟಾಂಪ್) ವನ್ನು ಹೊಂದಿರುವ ಸ್ವ – ವಿಳಾಸದ ಲಕೋಟೆಯನ್ನು ಸಲ್ಲಿಸತಕ್ಕದ್ದು.
6. ಅಭ್ಯರ್ಥಿಗೆ ಸಂದರ್ಶನಕ್ಕೆ ಹಾಜರಾಗಲು ಮಾಹಿತಿ ಸಿಗದಿದ್ದ ಪಕ್ಷದಲ್ಲಿ ಅವರು ಸಂದರ್ಶನಕ್ಕೆ ಹಾಜರಾಗಲು ಅನರ್ಹರೆಂದು ತಿಳಿಯತಕ್ಕದ್ದು. ಈ ಬಗ್ಗೆ ಕಛೇರಿಯೊಂದಿಗೆ ಯಾವುದೇ ಪತ್ರ ವ್ಯವಹಾರವನ್ನು ನಡೆಸಲು ಆಸ್ಪದವಿರುವುದಿಲ್ಲ.
7. ವಿವರಗಳನ್ನು ಕಾಲಂಗಳಲ್ಲಿ ಭರ್ತಿ ಮಾಡಿ ಬರೆದು ಅರ್ಜಿಗಳನ್ನು ಅಂಚೆ ಮೂಲಕ ಸಲ್ಲಿಸುವುದು ಅಥವಾ ಖುದ್ದಾಗಿ ತಂದು ಸಲ್ಲಿಸಿದಲ್ಲಿ ಈ ಕಛೇರಿಯ ವೇಳೆಯಲ್ಲಿ ಮಾತ್ರ ಸ್ವೀಕರಿಸಲಾಗುವುದು.
8. ನೈತಿಕ ದುರ್ನಡತೆಯಿಂದಾಗಿ / ನೀತಿಬಾಹಿರ ಚಟುವಟಿಕೆಗಳಿಂದಾಗಿ ನ್ಯಾಯಾಲಯದಿಂದ ಶಿಕ್ಷೆಗೊಳಪಟ್ಟಿರುವ ವ್ಯಕ್ತಿ ಅಥವಾ ರಾಜ್ಯ / ಕೇಂದ್ರ / ಸ್ಥಳೀಯ ಸಂಸ್ಥೆ ಕಛೇರಿಗಳಲ್ಲಿ ನೈತಿಕ ದುರ್ನಡತೆಯಿಂದಾಗಿ ಅಥವಾ ನೀತಿಬಾಹಿರ ಚಟುವಟಿಕೆಗಳಲ್ಲಿ ಒಳಗಾಗಿ ಅಥವಾ ಆಯ್ಕೆಯಾದ ಅಭ್ಯರ್ಥಿಯು ಬದಲಿಯಾಗಿ ಕಾರ್ಯ ನಿರ್ವಹಿಸುತ್ತಿದ್ದ ಸಂದರ್ಭದಲ್ಲಿ ಕಾನೂನು ಬಾಹಿರ / ನೀತಿ ಬಾಹಿರ ಚಟುವಟಿಕೆಗಳಲ್ಲಿ ತೊಡಗಿ ಸೇವೆಯಿಂದ ತೆಗೆದು ಹಾಕಿದ್ದಲ್ಲಿ / ವಜಾ ಮಾಡಲ್ಪಟ್ಟಿದ್ದು ಕಂಡು ಬಂದಲ್ಲಿ ನೇಮಕಾತಿಗೆ ಅನರ್ಹರಾಗುತ್ತಾರೆ.
9. ಅರ್ಜಿಯಲ್ಲಿ ತಪ್ಪು ಮಾಹಿತಿ ನೀಡಿ ಉದ್ಯೋಗ ಪಡೆಯುವ ಅಭ್ಯರ್ಥಿಗಳನ್ನು ಯಾವುದೇ ಸಮಯದಲ್ಲಾದರೂ ವಜಾ ಮಾಡಲಾಗುತ್ತದೆ. ಹಾಗೂ ಕಾನೂನು ಕ್ರಮ ಜರುಗಿಸಲಾಗುವುದು.
10. ಅಭ್ಯರ್ಥಿಗಳ ಆಯ್ಕೆಯ ವಿಷಯದಲ್ಲಿ ಆಯ್ಕೆ ಪ್ರಾಧಿಕಾರದ ನಿರ್ಧಾರವೇ ಅಂತಿಮವಾಗಿರುತ್ತದೆ.
11. ಪಿಂಚಣಿ ಸೌಲಭ್ಯ : ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ(ಎಸ್‌ಪಿಎಲ್) 04 ಪಿಇಟಿ 2005, ದಿನಾಂಕ 31.03.2006 ರಂತೆ.
12. ಕೊನೆಯ ದಿನಾಂಕದ ನಂತರ ಸಲ್ಲಿಸಲಾದ ಯಾವುದೇ ಅರ್ಜಿಗಳನ್ನು ಮತ್ತು ಅಂಚೆ ಮೂಲಕ ನಿಗದಿತ ದಿನಾಂಕದ ನಂತರ ಬಂದ ಅರ್ಜಿಗಳನ್ನು ಪರಿಗಣಿಸಲಾಗುವುದಿಲ್ಲ.
13. ಮೇಲ್ಕಂಡ ಹುದ್ದೆಗಳ ಸಂಖ್ಯೆ ಬದಲಾವಣೆಗೊಳ್ಳುವ ಸಂಭವವಿರುತ್ತದೆ.

**ವಿ.ಜಿ. ಸಾವಡ್ಕರ್**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ.

**ಅರ್ಜಿ ನಮೂನೆ**

ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು,
ಜಿಲ್ಲಾ ಮತ್ತು ಸತ್ರ ನ್ಯಾಯಾಲಯ,
ಚಾಮರಾಜನಗರ.

| ಇತ್ತೀಚಿನ ಭಾವಚಿತ್ರ ಲಗತ್ತಿಸಿ ಸಹಿ ಮಾಡುವುದು |
|---|

ಮಾನ್ಯರೇ,

ಚಾಮರಾಜನಗರ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರ ಪ್ರಕಟಣೆ ಸಂಖ್ಯೆ: ಎಡಿಎಂಎನ್/1764 /2014 ದಿನಾಂಕ 24.06.2014ರ ಪ್ರಕಾರ ............................................ ಹುದ್ದೆಗೆ ನಾನು ಈ ಮೂಲಕ ನನ್ನ ವಿವರದೊಂದಿಗೆ ಅರ್ಜಿ ಸಲ್ಲಿಸಿರುತ್ತೇನೆ.

| | | | | | |
|---|---|---|---|---|---|
| 1 | ಅಭ್ಯರ್ಥಿಯ ಪೂರ್ಣ ಹೆಸರು ಅಂಕಪಟ್ಟಿಯಲ್ಲಿರುವಂತೆ | | | | |
| 2 | ತಂದೆಯ / ತಾಯಿಯ / ಗಂಡನ ಹೆಸರು | | | | |
| 3 | ಪೂರ್ಣ ವಿಳಾಸ, ದೂರವಾಣಿ / ಮೊಬೈಲ್ ಸಂಖ್ಯೆಯೊಂದಿಗೆ : | | | | |
| 4 | ಜನ್ಮ ದಿನಾಂಕ :<br>ವಯಸ್ಸು : | | | | |
| 5 | ಲಿಂಗ | ಪುರುಷ / ಮಹಿಳೆ | | | |
| 6 | ಕೋರಿರುವ ಮೀಸಲಾತಿ : | | | | |
| 7 | ವಯೋಮಿತಿ ಸಡಿಲಿಕೆ ಅಪೇಕ್ಷಿಸಿದ್ದಲ್ಲಿ ಹಾಜರುಪಡಿಸಿರುವ ದಾಖಲೆ : | | | | |
| 8 | ರಾಷ್ಟ್ರೀಯತೆ :<br>ಧರ್ಮ : | | | | |
| 9 | ವಿವಾಹಿತರಾಗಿದ್ದರೆ ಗಂಡ ಅಥವಾ ಹೆಂಡತಿಯ ಹೆಸರು. | | | | |
| 10 | ವಿವಾಹಿತರಾದಲ್ಲಿ ಒಬ್ಬರಿಗಿಂತ ಹೆಚ್ಚು ಜೀವಂತ ಗಂಡ ಅಥವಾ ಹೆಂಡತಿ ಇದ್ದಾರೆಯೇ? | | | | |
| 11 | ನೀವು ಯಾವುದಾದರೂ ಕ್ರಿಮಿನಲ್ ಮೊಕದ್ದಮೆಯಲ್ಲಿ ಭಾಗಿಯಾಗಿದ್ದೀರ? | | | | |
| 12 | ಪ್ರಸ್ತುತ ಸರ್ಕಾರಿ ಸೇವೆಯಲ್ಲಿರುವಿರೆ? ಇದ್ದಲ್ಲಿ, ವಿವರಣೆ (ಇಲಾಖೆಯ ಹೆಸರು, ಹುದ್ದೆಯ ಪದನಾಮ, ಸೇವಾ ಅವಧಿ. | | | | |
| 13 | ನೀವು ಸರ್ಕಾರಿ ಸೇವೆಯಿಂದ ಅಥವಾ ಇನ್ನಾವುದಾದರು ಸೇವೆಯಿಂದ ವಜಾ ಆಗಿದ್ದೀರ ಅಥವಾ ತೆಗೆದುಹಾಕಲ್ಪಟ್ಟಿದ್ದೀರ? | | | | |
| 14 | ಶೈಕ್ಷಣಿಕ ವಿದ್ಯಾರ್ಹತೆಯ ವಿವರಗಳು : ( ಸ್ವಯಂ ದೃಢೀಕೃತ ಪ್ರಮಾಣ ಪತ್ರಗಳನ್ನು ಸಲ್ಲಿಸತಕ್ಕದ್ದು) | | | | |
| | ಉತ್ತೀರ್ಣ ಹೊಂದಿದ ಪರೀಕ್ಷೆಗಳು | ಉತ್ತೀರ್ಣ ಹೊಂದಿದ ವರ್ಷ ಮತ್ತು ನೊಂದಣಿ ಸಂಖ್ಯೆ | ಗರಿಷ್ಟ ಅಂಕಗಳು | ಪಡೆದಿರುವ ಅಂಕಗಳು | ಶೇಕಡಾವಾರು ಅಂಕಗಳು |
| ಎ | 7ನೇ ತರಗತಿ | | | | |
| ಬಿ | ಎಸ್.ಎಸ್.ಎಲ್.ಸಿ. / ತತ್ಸಮಾನ ಪರೀಕ್ಷೆ | | | | |
| ಸಿ | ಕಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |
| ಡಿ | ಕಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಇ | ಹಿರಿಯ ದರ್ಜೆಯ ಕನ್ನಡ ಬೆರಳಚ್ಚು ಪರೀಕ್ಷೆ | | | | |

| | | | | | |
|---|---|---|---|---|---|
| ಎಫ್ | ಹಿರಿಯ ದರ್ಜೆಯ ಆಂಗ್ಲ ಬೆರಳಚ್ಚು ಪರೀಕ್ಷೆ | | | | |
| ಜಿ | ಹಿರಿಯ ದರ್ಜೆಯ ಕನ್ನಡ ಶೀಘ್ರಲಿಪಿ ಪರೀಕ್ಷೆ | | | | |
| ಹೆಚ್ | ಹಿರಿಯ ದರ್ಜೆಯ ಆಂಗ್ಲ ಶೀಘ್ರಲಿಪಿ ಪರೀಕ್ಷೆ | | | | |
| 15 | ವಾಹನ ಪರವಾನಗಿ ಹೊಂದಿದ್ದಲ್ಲಿ ಅದರ ವಿವರ (ಆದೇಶ ಜಾರೀಕಾರರ ಹುದ್ದೆಗೆ ಅರ್ಜಿ ಸಲ್ಲಿಸುವವರಿಗೆ ಮಾತ್ರ) | | | | |
| 16 | ಕಂಪ್ಯೂಟರ್ ತರಬೇತಿಯನ್ನು ಪಡೆದಿದ್ದಲ್ಲಿ ಪ್ರಮಾಣ ಪತ್ರಗಳನ್ನು ಲಗತ್ತಿಸುವುದು. | | | | |

**ಸೂಚನೆ :** ಅಭ್ಯರ್ಥಿಯು ತನಗೆ ಅನ್ವಯವಾಗದ್ದನ್ನು "ಅನ್ವಯಿಸುವುದಿಲ್ಲ" ಎಂದು ನಮೂದಿಸುವುದು.

**ಘೋಷಣೆ**

ಈ ಮೇಲೆ ನಮೂದಿಸಿರುವ ಮಾಹಿತಿ ಮತ್ತು ವಿವರಗಳು ನನಗೆ ತಿಳಿದ ಮಟ್ಟಿಗೆ ಸತ್ಯವಾಗಿದ್ದು ಹಾಗೂ ಒಂದು ವೇಳೆ ಅವು ಅಸತ್ಯವೆಂದು ಕಂಡು ಬಂದಲ್ಲಿ ನನ್ನ ಅಭ್ಯರ್ಥಿತನವನ್ನು ಬಿಟ್ಟು ಬಿಡಲು ನಾನು ಬದ್ಧನಾಗಿರುತ್ತೇನೆ / ಬದ್ಧಳಾಗಿರುತ್ತೇನೆ. ನಾನು ಆಯ್ಕೆಗೊಂಡರೆ ಚಾಮರಾಜನಗರ ಜಿಲ್ಲಾ ನ್ಯಾಯಾಂಗ ಘಟಕದ ಯಾವುದೇ ನ್ಯಾಯಾಲಯಗಳಲ್ಲಿ ಕರ್ತವ್ಯ ನಿರ್ವಹಿಸಲು ಸಿದ್ದನಿದ್ದೇನೆ / ಸಿದ್ದಳಿದ್ದೇನೆ.

ಸ್ಥಳ :

ದಿನಾಂಕ : ಅಭ್ಯರ್ಥಿಯ ಸಹಿ

**ವಿ.ಜಿ. ಸಾವಡ್ಕರ್**

**PR.65** ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಚಾಮರಾಜನಗರ.

## ಜಿಲ್ಲಾಧಿಕಾರಿಯವರ ಕಛೇರಿ, ತುಮಕೂರು ಜಿಲ್ಲೆ, ತುಮಕೂರು.

### ಅಧಿಕೃತ ಜ್ಞಾಪನ

**ನಂ. ವಿಎಎಸ್. ಸಿಆರ್: 266/10–11, ತುಮಕೂರು, ದಿನಾಂಕ: 23/29/05/2014.**

**ವಿಷಯ:** ತುಮಕೂರು ಜಿಲ್ಲೆಯ ಕಂದಾಯ ಘಟಕದಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿ ಮೂಲಕ ಭರ್ತಿ ಮಾಡುವ ಕುರಿತು.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ ಸಿಆಸುಇ 128 ಸೆಸೇನಿ 2006, ದಿನಾಂಕ: 01/08/2009
2. ಸರ್ಕಾರದ ಪತ್ರ ಸಂಖ್ಯೆ ಕಂಇ 04 ಬಿಎಸ್‌ಸಿ 2011, ದಿನಾಂಕ: 25/02/2011.
3. ಸರ್ಕಾರದ ಆದೇಶ ಸಂಖ್ಯೆ ಕಂಇ 33 ಡಿಎಸ್‌ಪಿ 2012, ದಿನಾಂಕ: 05.06.2012.
4. ಸರ್ಕಾರದ ಸುತ್ತೋಲೆ ಸಂಖ್ಯೆ ಕಂಇ 100 ಬಿಎಸ್‌ಸಿ 2011, ದಿನಾಂಕ: 29.06.2012.
5. ಈ ಕಛೇರಿಯ ಅಧಿಸೂಚನೆ ಸಂಖ್ಯೆ: ಗ್ರಾ. ಲೆ ಸಿಬ್ಬಂದಿ. ಸಿಆರ್. 266/10–11, ದಿನಾಂಕ: 30.07.2012.
6. ಈ ಕಛೇರಿಯ ತಿದ್ದುಪಡಿ ಅಧಿಸೂಚನೆ ಸಂಖ್ಯೆ: ಗ್ರಾ. ಲೆ ಸಿಬ್ಬಂದಿ. ಸಿಆರ್. 266/10–11, ದಿನಾಂಕ: 07.08.2012
7. ಈ ಕಛೇರಿಯ ಪ್ರಕಟಣೆ ಸಂಖ್ಯೆ ಗ್ರಾ. ಲೆ ಸಿಬ್ಬಂದಿ. ಸಿಆರ್. 266/10–11, ದಿನಾಂಕ: 26.08.2013 ಮತ್ತು 04.09.2013
8. ಈ ಕಛೇರಿಯ ಅಧಿಸೂಚನೆ ಸಂಖ್ಯೆ ಗ್ರಾ. ಲೆ ಸಿಬ್ಬಂದಿ. ಸಿಆರ್. 266/10–11, ದಿನಾಂಕ: 20.09.2013 (ಅಂತಿಮ ಆಯ್ಕೆ ಪಟ್ಟಿ ಮತ್ತು ಕಾಯ್ದಿರಿಸಲಾದ ಪಟ್ಟಿ)

ಸರ್ಕಾರದ ಉಲ್ಲೇಖ (2)ರ ಪತ್ರದಲ್ಲಿ ತುಮಕೂರು ಜಿಲ್ಲೆಯಲ್ಲಿ ಖಾಲಿ ಇರುವ ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸರ್ಕಾರ ಅನುಮೋದನೆಯನ್ನು ನೀಡಿದೆ. ಅದರಂತೆ ನೇಮಕಾತಿ ಪ್ರಕ್ರಿಯೆಯನ್ನು ಉಲ್ಲೇಖ (1) (2) ಮತ್ತು (4)ರ ಅನ್ವಯ ಹಾಗೂ ಕರ್ನಾಟಕ ನಾಗರೀಕ ಸೇವೆ (Revenue Sub ordinate Branch) (Cadre and Recruitment) (Amendment) ನಿಯಮಗಳು, 2009ರಂತೆ ಉಲ್ಲೇಖ (6)ರ ತಿದ್ದುಪಡಿ ಅಧಿಸೂಚನೆಯಲ್ಲಿ ತಿಳಿಸಿರುವಂತೆ ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಉಲ್ಲೇಖ (6)ರ ತಿದ್ದುಪಡಿ ಅಧಿಸೂಚನೆ ಹೊರಡಿಸಲಾದ ದಿನಾಂಕದಂದು ಖಾಲಿ ಇದ್ದ 81 ಗ್ರಾಮಲೆಕ್ಕಿಗರ ಹುದ್ದೆ ಹಾಗೂ ಸರ್ಕಾರ ಉಲ್ಲೇಖ (3)ರ ಆದೇಶದಲ್ಲಿ ಹೊಸ ನಾಡ ಕಛೇರಿಗಳಿಗೆ ಸೃಜಿಸಲಾಗಿರುವ 20 ಗ್ರಾಮಲೆಕ್ಕಿಗರ ಹುದ್ದೆಗಳು ಸೇರಿ ಒಟ್ಟು 101 ಗ್ರಾಮಲೆಕ್ಕಿಗರ ಹುದ್ದೆಗಳಿಗೆ ನೇರ ನೇಮಕಾತಿಯ ಮೂಲಕ ಭರ್ತಿಗೊಳಿಸಲು ಗ್ರಾಮಲೆಕ್ಕಿಗರ ನೇರ ನೇಮಕಾತಿ ಪ್ರಾಧಿಕಾರದ ನಿರ್ಣಯದಂತೆ ಕ್ರಮ ಕೈಗೊಳ್ಳಲಾಗಿದೆ.

ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿ ಖಾಲಿ ಇದ್ದ 101 ಗ್ರಾಮಲೆಕ್ಕಿಗರ ಹುದ್ದೆಗಳನ್ನು ಭರ್ತಿ ಮಾಡಲು ಆನ್ ಲೈನ್ ಮೂಲಕ ಸ್ವೀಕೃತವಾದ ಅರ್ಜಿಗಳಲ್ಲಿ 1:5 ಅನುಪಾತ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು 29.09.2012ರಂದು ಪ್ರಕಟಿಸಿ ಸದರಿ ಪಟ್ಟಿಯಲ್ಲಿನ ಅಭ್ಯರ್ಥಿಗಳ ಮೂಲ ದಾಖಲೆಯನ್ನು ಪರಿಶೀಲಿಸಲಾಗಿದೆ. ಅಂಗವಿಕಲ ಅಭ್ಯರ್ಥಿಗಳಿಗೆ ಸಂಬಂಧಿಸಿದಂತೆ ಒಬ್ಬ ಅಭ್ಯರ್ಥಿಯು 1:5 ರಲ್ಲಿ ಲಭ್ಯರಾಗದ ಕಾರಣ Ranking list ನಿಂದ ಮೆರಿಟ್‌ನಂತೆ ಮೂಲ ದಾಖಲೆ ಪರಿಶೀಲನೆಗೆ ಒಳಪಡಿಸಿದ್ದು, ನಂತರದಲ್ಲಿ ದಿನಾಂಕ: 26.08.2013ರಂದು ಪ್ರಕಟಣೆಯೊಂದಿಗೆ 1:1 Provisional Selection list & Waiting list ಅನ್ನು ಹೊರಡಿಸಿ ದಿನಾಂಕ: 26.08.2013 ರಿಂದ 02.09.2013ರ ವರೆಗೆ ಅಭ್ಯರ್ಥಿಗಳಿಂದ ಆಕ್ಷೇಪಣೆ/ತಕರಾರು ಇದ್ದಲ್ಲಿ ಸಲ್ಲಿಸುವಂತೆ ತಿಳಿಸಲಾಗಿತ್ತು. ದಿನಾಂಕ: 26.08.2013 ರಿಂದ 02.09.2013ರ ಅವಧಿಯಲ್ಲಿ ಸ್ವೀಕೃತವಾಗಿರುವ ಆಕ್ಷೇಪಣೆ/ತಕರಾರು ಕುರಿತು ಪರಿಶೀಲಿಸಿ ವಿಲೇವಾರಿ ಮಾಡಲಾಗಿದೆ. ಅರ್ಹ ಅಭ್ಯರ್ಥಿಗಳ ಆಯ್ಕೆ ಪಟ್ಟಿಯನ್ನು ಮೆರಿಟ್ ಮತ್ತು ಮೀಸಲಾತಿ ಆಧಾರದ ಮೇರೆಗೆ 101 ಅಭ್ಯರ್ಥಿಗಳ ಅಂತಿಮ ಆಯ್ಕೆ ಪಟ್ಟಿಯನ್ನು ಮತ್ತು ಕಾಯ್ದಿರಿಸಿದ ಪಟ್ಟಿಯನ್ನು ಜಿಲ್ಲಾಧಿಕಾರಿಯವರ ವೆಬ್ ಸೈಟ್ www.tumkur.nic.in ರಲ್ಲಿ ಉಲ್ಲೇಖ (8)ರ ಅಧಿಸೂಚನೆಯೊಂದಿಗೆ ಪ್ರಚುರಪಡಿಸಲಾಗಿದ್ದು, ಅಂತಿಮ ಆಯ್ಕೆ ಪಟ್ಟಿಯಲ್ಲಿನ ಅಭ್ಯರ್ಥಿಗಳ ಪೈಕಿ ಮೂಲ ದಾಖಲೆಗಳನ್ನು ಸಲ್ಲಿಸಿರುವ ಅಭ್ಯರ್ಥಿಗಳಲ್ಲಿ ಮೂಲ ದಾಖಲೆಗಳ ಪರಿಶೀಲನಾ ವರದಿ ಬಂದಿರುವ ಹಾಗೂ ಪೂರ್ಣ ಪ್ರಮಾಣದಲ್ಲಿ ನೈಜತಾ ವರದಿ ಬಂದಿರುವ ಈ ಕೆಳಕಾಣಿಸಿರುವ ಅಭ್ಯರ್ಥಿಗಳನ್ನು ತುಮಕೂರು ಜಿಲ್ಲಾ ಕಂದಾಯ ಘಟಕದಲ್ಲಿನ ಗ್ರಾಮಲೆಕ್ಕಿಗರ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಹೊರಡಿಸಲಾದ ಅಧಿಸೂಚನೆ/ಪ್ರಕಟಣೆಗಳ ವಿರುದ್ಧ ರಾಜ್ಯದ ಮಾನ್ಯ ಉಚ್ಚ ನ್ಯಾಯಲಯದಲ್ಲಿ ದಾಖಲಾಗಿರುವ ರಿಟ್ ಪಿಟಿಷನ್ ನಂ.41070–41071ರಲ್ಲಿ ಮಾನ್ಯ ಉಚ್ಚ ನ್ಯಾಯಾಲಯದ ಮುಂದಿನ ಆದೇಶಕ್ಕೆ ಈ ನೇಮಕಾತಿ ಆದೇಶ ಒಳಪಟ್ಟು ನೇಮಕಾತಿ ಮಾಡಲಾಗಿದೆ.

ಈ ಆದೇಶದಲ್ಲಿ ಈ ಕೆಳಗೆ ಹೆಸರಿಸಿರತಕ್ಕ ಆಯ್ಕೆಯಾದ ಅಭ್ಯರ್ಥಿಗಳನ್ನು ಗ್ರಾಮಲೆಕ್ಕಾಧಿಕಾರಿ ಹುದ್ದೆಯ ರೂ. 11600–200–12000–250–13000–300–14200–350–15600–400–17200–450–19000–500–21000 ವೇತನ ಶ್ರೇಣಿಯಲ್ಲಿ ಅವರ ಹೆಸರಿನ ಎದುರು ನಮೂದಿಸಿರುವ ಕಂದಾಯ ವೃತ್ತಗಳಿಗೆ ಈ ಕೆಳಕಂಡ ನಿಬಂಧನೆಗಳನುಸಾರ ನೇಮಕಾತಿ ಮಾಡಿ ಆದೇಶ ಹೊರಡಿಸಿದೆ.

| ಕ್ರ. ಸಂ. | ಅಭ್ಯರ್ಥಿಯ ಹೆಸರು ಮತ್ತು ವಿಳಾಸ | ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕ ಮಾಡಲಾದ ತಾಲ್ಲೂಕು ಹಾಗೂ ಸ್ಥಳ | ಕರ್ತವ್ಯದ ಮೇಲೆ ಹಾಜರಾಗಬೇಕಾದ ಕಛೇರಿ |
|---|---|---|---|
| 1 | 2 | 3 | 4 |
| 1 | ಶ್ರೀ ನಾಗರಾಜ ಮಲ್ಲಾಪುರ ಬಿನ್ ಕೊಟ್ರಪ್ಪ ಮಲ್ಲಾಪುರ, ವಟ್ಲಹಳ್ಳಿ ಗ್ರಾಮ, ಹರಪನಹಳ್ಳಿ ತಾಲ್ಲೂಕು, ದಾವಣಗೆರೆ ಜಿಲ್ಲೆ. | ಹುಯಿಲ್‌ದೊರೆ ವೃತ್ತ, ಬುಕ್ಕಾಪಟ್ಟಣ ಹೋಬಳಿ, ಶಿರಾ ತಾಲ್ಲೂಕು. | ತಹಶೀಲ್ದಾರರ ಕಛೇರಿ, ಶಿರಾ ತಾಲ್ಲೂಕು. |

**ಷರತ್ತುಗಳು:**

1. ನೇಮಕವಾದ ಅಭ್ಯರ್ಥಿಗಳು ಈ ಆದೇಶ ದಿನಾಂಕದಿಂದ 15 ದಿವಸಗಳೊಳಗಾಗಿ ಅವರ ಹೆಸರಿನ ಮುಂದೆ ಸೂಚಿಸಿರತಕ್ಕ ತಾಲ್ಲೂಕು ತಹಸೀಲ್ದಾರ್, ರವರ ಸಮಕ್ಷಮದಲ್ಲಿ ಕರ್ತವ್ಯಕ್ಕೆ ಹಾಜರಾಗತಕ್ಕದ್ದು.
2. ಅಭ್ಯರ್ಥಿಯು ತನ್ನ ಹುಟ್ಟಿದ ದಿನಾಂಕ: ಶೈಕ್ಷಣಿಕ ಅರ್ಹತೆಗಳ ಪ್ರಮಾಣ ಪತ್ರ ಹಾಗೂ ಸಕ್ಷಮ ಪ್ರಾಧಿಕಾರದಿಂದ ನೀಡಲ್ಪಟ್ಟ ಮೀಸಲಾತಿ ಪ್ರಮಾಣ ಪತ್ರ (ಮೀಸಲಾತಿಯಡಿ ಆಯ್ಕೆಯಾದ ಅಭ್ಯರ್ಥಿಗಳು ಮಾತ್ರ) ಹಾಗೂ ಅಭ್ಯರ್ಥಿಯು ವಾಸಿಸುತ್ತಿರುವ ಕ್ಷೇತ್ರ, ಸಂಬಂಧಿಸಿದ ಕನಿಷ್ಠ ಇಬ್ಬರು ಗಣ್ಯವ್ಯಕ್ತಿಗಳಿಂದ ನೀಡಲ್ಪಟ್ಟ ನಡತೆ ಪ್ರಮಾಣ ಪತ್ರ ಇವುಗಳ ಮೂಲ ಪ್ರತಿಗಳನ್ನು ಕರ್ತವ್ಯಕ್ಕೆ ಹಾಜರಾಗುವ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ನೀಡತಕ್ಕದ್ದು. ಅಭ್ಯರ್ಥಿಯ ಗುರುತಿನ ಬಗ್ಗೆ ನಿಕರವಾಗಿ ಪರಿಶೀಲಿಸಿಕೊಂಡ ನಂತರ ಕರ್ತವ್ಯಕ್ಕೆ ತೆಗೆದುಕೊಳ್ಳಲು ತಹಶೀಲ್ದಾರ್ ಇವರಿಗೆ ಸೂಚಿಸಿದೆ.
3. ಅಭ್ಯರ್ಥಿಗಳು ಕೆಲಸಕ್ಕೆ ಹಾಜರಾದ ದಿನಾಂಕದಿಂದ 2 ವರ್ಷಗಳ ಅವಧಿಗೆ ಪರಿವೀಕ್ಷಣಾ (ಪ್ರೊಬೇಷನರಿ) ಅವಧಿಯಲ್ಲಿದ್ದು ಅವರು ಈ ಅವಧಿಯಲ್ಲಿ ಕೆಳಗೆ ನಮೂದಿಸಿರುವ ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆಯಾಗತಕ್ಕದ್ದು. (1)ಅಕೌಂಟ್ಸ್ ಲೋಯರ್ (2)ರೆವಿನ್ಯೂ ಲೋಯರ್ (3) ಕನ್ನಡ ಭಾಷಾ ಪರೀಕ್ಷೆ (ಎಸ್‌ಎಸ್‌ಎಲ್‌ಸಿ ಯಲ್ಲಿ ಕನ್ನಡ ಭಾಷೆಯನ್ನು ಪ್ರಥಮ ಅಥವಾ ದ್ವಿತೀಯ ಭಾಷೆಯಾಗಿ ತೆಗೆದುಕೊಳ್ಳದಿದ್ದಲ್ಲಿ, ಕನ್ನಡ ಭಾಷೆ ಪರೀಕ್ಷೆಯನ್ನು ಪಾಸು ಮಾಡತಕ್ಕದ್ದು.) ಈ ಅವಧಿಯಲ್ಲಿ ನಿಗದಿತ ಇಲಾಖಾ ಪರೀಕ್ಷೆಗಳನ್ನು ಪಾಸು ಮಾಡದಿದ್ದಲ್ಲಿ ಅಥವಾ ಕೆಲಸ ಕಾರ್ಯಗಳು ತೃಪ್ತಿಕರವಾಗಿರದಿದ್ದಲ್ಲಿ ಅವರನ್ನು ಸೇವೆಯಿಂದ ಕರ್ನಾಟಕ ನಾಗರೀಕ ಸೇವಾ (ಪರಿವೀಕ್ಷಣಾ) ನಿಯಮಗಳು 1977 ನಿಯಮ 6(1)ರಂತೆ ಸೇವೆಯಿಂದ ತೆಗೆದುಹಾಕಲಾಗುವುದು.
4. ಈ ನೇಮಕಾತಿಯು ಸಂಪೂರ್ಣ ತಾತ್ಕಾಲಿಕವಾಗಿದ್ದು ಸರ್ಕಾರವು ಇಚ್ಛಿಸಿದಲ್ಲಿ ಅಥವಾ ಹುದ್ದೆಗಳು ರದ್ದಾದಲ್ಲಿ ಅಥವಾ ಸಿಂಧುತ್ವದ ನೈಜತೆ ಸಾಬೀತಾಗದಿದ್ದಲ್ಲಿ ಅಥವಾ ಸುಳ್ಳು ಮಾಹಿತಿ ನೀಡಿ ಉದ್ಯೋಗ ಪಡೆದಿರುವುದು ಕಂಡು ಬಂದಲ್ಲಿ ಅವರನ್ನು ಯಾವುದೇ ಸಮಯದಲ್ಲಿ ಯಾವುದೇ ಮುನ್ಸೂಚನೆ ಇಲ್ಲದೆ ಸೇವೆಯಿಂದ ತೆಗೆದು ಹಾಕಲಾಗುವುದು.
5. ಅಭ್ಯರ್ಥಿಯು ಸೇವೆಗೆ ಹಾಜರಾಗುವ ಸಂದರ್ಭದಲ್ಲಿ ಭಾರತ ಸಂವಿಧಾನದ ರೀತ್ಯಾ "ನಿಷ್ಠೆಯ ಪ್ರಮಾಣ ವಚನ" ಸ್ವೀಕರಿಸತಕ್ಕದ್ದು.
6. ಅಭ್ಯರ್ಥಿಗಳು ಸರ್ಕಾರದ ಸಕ್ಷಮ ಜಿಲ್ಲಾ ವೈದ್ಯಕೀಯ ಪ್ರಾಧಿಕಾರದಿಂದ ಪಡೆದಿರುವ ದೈಹಿಕ ಅರ್ಹತಾ ಪ್ರಮಾಣ ಪತ್ರವನ್ನು ಕರ್ತವ್ಯಕ್ಕೆ ಹಾಜರಾದ ಸಂದರ್ಭದಲ್ಲಿ ತಹಶೀಲ್ದಾರ್ ಇವರಿಗೆ ಸಲ್ಲಿಸತಕ್ಕದ್ದು.
7. ಸರ್ಕಾರದ ಸುತ್ತೋಲೆ ಸಂ. ಕಂಇ 54 ಬಿಎಸ್‌ಸಿ 2007 ದಿನಾಂಕ 27.03.2007ರ ಅನ್ವಯ ಅಂತರ ಜಿಲ್ಲಾ ವರ್ಗಾವಣೆಗೆ ತುಮಕೂರು ಜಿಲ್ಲೆಯಲ್ಲಿ ಕನಿಷ್ಠ ಪಕ್ಷ 05 ವರ್ಷಗಳ ಸೇವೆಯನ್ನು ಕಡ್ಡಾಯವಾಗಿ ಪೂರೈಸತಕ್ಕದ್ದು.

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



8. ಅಭ್ಯರ್ಥಿಗಳು ಉದ್ಯೋಗ ವಿನಿಯಮ ಕೇಂದ್ರದಲ್ಲಿ ನೋಂದಾಯಿಸಿದ್ದಲ್ಲಿ, ಗುರುತಿನ ಚೀಟಿಯನ್ನು ತಹಶೀಲ್ದಾರರು ಅಭ್ಯರ್ಥಿಗಳಿಂದ ಪಡೆದು ಉದ್ಯೋಗ ವಿನಿಮಯ ಕೇಂದ್ರಕ್ಕೆ ಸರಂಡರ್ ಮಾಡುವುದು.
9. ಅಭ್ಯರ್ಥಿಗಳು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು 1958 ಕರ್ನಾಟಕ ನಾಗರೀಕ ಸೇವಾ (ಸಿಸಿಎ) ನಿಯಮಾವಳಿ 1957 ಕರ್ನಾಟಕ ನಾಗರೀಕ ಸೇವಾ ನಡತೆ ನಿಯಮಾವಳಿ 1966 ಹಾಗೂ ಕಾಲಕಾಲಕ್ಕೆ ಸರ್ಕಾರದಿಂದ ಹೊರಡಿಸಲಾಗುವ ಇತರೆ ನಿಯಮಾವಳಿಗಳಿಗೆ ಬದ್ಧರಾಗಿರುತ್ತಾರೆ.
10. ಇದು ನೇರ ನೇಮಕಾತಿ ಹುದ್ದೆ ಆದ ಕಾರಣ ಅಭ್ಯರ್ಥಿಯು ಸೇವೆಗೆ ಸೇರಿದ ದಿನಾಂಕದಿಂದ ಜೇಷ್ಠತೆಯನ್ನು ಪರಿಗಣಿಸಲಾಗುವುದು.
11. ಗ್ರಾಮಲೆಕ್ಕಿಗರ ಹುದ್ದೆಗೆ ನೇಮಕಾತಿ ಹೊಂದಿರುವುದರಿಂದ ಅಭ್ಯರ್ಥಿಯು ಕರ್ತವ್ಯಕ್ಕೆ ಹಾಜರಾಗುವಾಗ ರೂ.1000.00 (ರೂಪಾಯಿಗಳು ಒಂದು ಸಾವಿರ ಮಾತ್ರ) ಭದ್ರತಾ ಠೇವಣಿಯನ್ನು ನಗದು ರೂಪದಲ್ಲಾಗಲೀ, ಅಥವಾ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕವಾಗಲೀ ಸಂಬಂಧಪಟ್ಟ ತಹಸೀಲ್ದಾರ್‌ರವರಲ್ಲಿ ಹಾಜರುಪಡಿಸತಕ್ಕದ್ದು. ಅಥವಾ ಈ ಮೊತ್ತಕ್ಕೆ ಭದ್ರತಾ ಮುಚ್ಚಳಿಕೆ ಪತ್ರವನ್ನು ಛಾಪಾ ಕಾಗದದಲ್ಲಿ ಬರೆಯಿಸಿ ಒಬ್ಬರ ಜಾಮೀನು ಕೊಡತಕ್ಕದ್ದು. ತಹಶೀಲ್ದಾರರು ಈ ಮೊತ್ತದ ರಾಷ್ಟ್ರೀಯ ಉಳಿತಾಯ ಪತ್ರದ ಮೂಲಕ ಸರ್ಕಾರಕ್ಕೆ ಪ್ಲಡ್ಜ್ ಮಾಡಿಕೊಳ್ಳತಕ್ಕದ್ದು.
12. ಅಭ್ಯರ್ಥಿಯು ಇಲಾಖೆಯಿಂದ ಕಾಲಕಾಲಕ್ಕೆ ನಿಗದಿಪಡಿಸಿದ ಹಾಗೂ ನಿಗದಿಪಡಿಸಲಾಗುವ ವಿವಿಧ ಪರೀಕ್ಷೆ/ ತರಬೇತಿಗಳನ್ನು ಯಶಸ್ವಿಯಾಗಿ ಮುಗಿಸತಕ್ಕದ್ದು.
13. ಈಗಾಗಲೇ ಸರ್ಕಾರಿ ಸೇವೆಯಲ್ಲಿರುವ ಹಾಗೂ ಇಲಾಖಾ ಮುಖ್ಯಸ್ಥರ ಮೂಲಕ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳು ನಿಯಮಾವಳಿಗಳನ್ನು ಉಲ್ಲಂಘಿಸಿ ಅರ್ಜಿ ಸಲ್ಲಿಸಿರುವುದಿಲ್ಲವೆಂಬ ಬಗ್ಗೆ ಪ್ರಮಾಣ ಪತ್ರವನ್ನು ಸಲ್ಲಿಸತಕ್ಕದ್ದು. ಹಾಗೂ ಮೇಲೆ ಸೂಚಿಸಿದ ಕಾರ್ಯಸ್ಥಳಗಳಲ್ಲಿ ವರದಿ ಮಾಡಿಕೊಳ್ಳುವ ಮೊದಲು ಮುಂಚಿನ ಸೇವೆಯಿಂದ ಬಿಡುಗಡೆ ಆದೇಶ ಪಡೆದಿರಬೇಕು.
14. ಅಭ್ಯರ್ಥಿಗಳು ತಮ್ಮ ಕುಟುಂಬದ ಒಟ್ಟು ಚರ-ಸ್ಥಿರ ಆಸ್ತಿಯ ವಿವರದ ಬಗ್ಗೆ ವರದಿಯನ್ನು ನಿಗಧಿಪಡಿಸಲಾಗಿರುವ ನಮೂನೆಯಲ್ಲಿ ಸಲ್ಲಿಸತಕ್ಕದ್ದು.
15. ಅಭ್ಯರ್ಥಿಗೆ ಕೆಲಸಕ್ಕೆ ಹಾಜರಾಗುವ ಸಂದರ್ಭದಲ್ಲಿ ಪ್ರಯಾಣ ಭತ್ಯೆ ಅಥವಾ ಇತರೆ ಯಾವುದೇ ಭತ್ಯೆಯನ್ನು ನೀಡಲಾಗುವುದಿಲ್ಲ.
16. ಈ ನೇಮಕಾತಿ ಆದೇಶದಲ್ಲಿನ ಅಭ್ಯರ್ಥಿಗಳ ವೇತನವನ್ನು ಪ್ರಥಮ ವೇತನ ಡ್ರಾ ಮಾಡಲು ಈ ಕಛೇರಿಯ ಆದೇಶ ಪಡೆಯದೆ ಡ್ರಾ ಮಾಡದಿರಲು ಸಂಬಂಧಪಟ್ಟ ತಹಸೀಲ್ದಾರ್‌ರವರಿಗೆ ಸೂಚಿಸಿದೆ.

**ಕೆ. ಎಸ್. ಸತ್ಯಮೂರ್ತಿ**
ಜಿಲ್ಲಾಧಿಕಾರಿ
ತುಮಕೂರು ಜಿಲ್ಲೆ.

**PR.59**
**SC.25**

*ಮುದ್ರಕರು ಹಾಗೂ ಪ್ರಕಾಶಕರು:–* ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59